# ಪ್ರಕಾಶಕರ ಮಾತು

ಸೌಭಾಗ್ಯವತಿ ಉಮಾದೇವಿಯವರು ಬರೆದ ಕತೆ ಹಲವು ಆಗಾಗ ಜೀವನ ಪತ್ರಿಕೆಯಲ್ಲಿ ಪ್ರಕಟ ಆದದ್ದುಂಟು. ಇವರ ಇತರ ಕತೆಗಳು ಬೇರೆ ಪತ್ರಿಕೆಗಳಲ್ಲಿಯೂ ಪ್ರಕಟವಾಗಿವೆ. ಈ ಪುಸ್ತಕ ಹೀಗೆ ಪ್ರಕಟ ಆದ ಹಲವು ಕತೆಗಳ ಸಂಕಲನ. ಶ್ರೀಮತಿಯವರ ಕತೆಗಳು ಈ ಮೊದಲು ನಮ್ಮ ಜನರ ಮೆಚ್ಚಿಕೆಯನ್ನು ಪಡೆದಿವೆ. ಇವರು ನಮ್ಮ ಜೀವನವನ್ನು ಕುರಿತು ಸುಸಂಸ್ಕೃತರಾದ ಹೆಣ್ಮಗಳೊಬ್ಬರ ದೃಷ್ಟಿಯನ್ನು ತಿಳಿಸಿಕೊಡುವ ರೆಂಬ ಕಾರಣದಿಂದ ವಿಶೇಷವಾದ ಒಂದು ಗಮನಕ್ಕೆ ಅರ್ಹವಾಗಿವೆ. ಕನ್ನಡದ ನಮ್ಮ ಸೋದರಿಯರು ಇದರಂತೆ ಇನ್ನೂ ಹೆಚ್ಚು ಹೆಚ್ಚಾಗಿ ತಮ್ಮ ತಮ್ಮ ಕಲ್ಪನೆಯನ್ನು ನಾಡಿಗೆ ತಿಳಿಸಬೇಕು ಎಂಬುದು ನಮ್ಮ ಅಪೇಕ್ಷೆ. ಈ ಮೊದಲೆ ಮೆಚ್ಚಿಕೊಂಡ ಕತೆಗಳಿಗೆ ನಮ್ಮ ಜನ ಸ್ವಾಗತವನ್ನು ನೀಡುವ ರೆಂದು ನಂಬಿದ್ದೇವೆ.

ಈ ಸಂಕಲನವನ್ನು ಜೀವನ ಸಾಹಿತ್ಯಮಾಲೆಯಲ್ಲಿ ಸೇರಿಸಲು ಅನುಮತಿ ಕೊಟ್ಟ ಬಗ್ಗೆ ನಾವು ಶ್ರೀಮತಿಯವರಿಗೆ ಕೃತಜ್ಞರಾಗಿದ್ದೇವೆ.

ವಿಜಯ ಸಂ॥ ಮಾಘ ಕೃಷ್ಣ<br>
ತ್ರಯೋದಶಿ ಬುಧವಾರ<br>
(ತಾ॥ 3–3–1954)

# ಅದರ ಜೊತೆಗೆ?

ಸರಳೆ ಮುಹಡಿಯ ಮೇಲೆ ನಿಂತು ತಲೆ ಒಣಗಿಸಿಕೊಳ್ಳುತ್ತಿದ್ದಳು. ರಾಮನಾಥ ಅಲ್ಲೇ ಸ್ವಲ್ಪ ದೂರದಲ್ಲಿ ನಿಂತಿದ್ದವನು ಕೇಳಿದನು.

"ಸರಳಾ, ಬೀದಿಯ ಬಾಗಿಲು ಹಾಕದ್ವೀಯಾ"

"ಹೂಂ, ಹಾಕಿರಬೇಕು"

ಅಷ್ಟರಲ್ಲಿ ನಂಜ—ಚಾಪೆಯವನು—ಕೆಲವು ಚಾಪೆಗಳನ್ನು ಹೊತ್ತು ಕೊಂಡು ಬಂದ. ಸರಳೆ, "ನಡುಮನೆಯ ರತ್ನಗಂಬಳಿಗೆ ಜೊತೆಯೊಂದು ಬೇಕು" ಎಂದಳು. ರಾಮನಾಥ, "ಇರಲಿ, ನೋಡೋಣ" ಎಂದು ಹೇಳಿ, ಚಾಪೆಯವನನ್ನು ಕೂಗಿದನು. ನಂಜ ಚಾಪೆ ಹೊತ್ತುಕೊಂಡು ಬಂದನು.

ಅವನು ಮೊದಲು ನಾಲ್ಕೈದು ಚಾಪೆಗಳನ್ನು ತೋರಿಸಿದನು. ಅವು ಯಾವುವೂ ಅವಳಿಗೆ ಸರಿಬೀಳಲಿಲ್ಲ. ಆಮೇಲೆ ಒಂದು ರತ್ನಗಂಬಳಿ ತೋರಿಸಿದ. ನೋಡಿ ಅವಳ ಕಣ್ಣರಳಿತು.

ಬಾನ ನೀಲಿಮೆ ಪ್ರತಿಬಿಂಬಿಸಿದ್ದ ತಿಳಿಗೊಳ. ಎದುರಿನಲ್ಲೊಂದು ಜಿಂಕೆ ತನ್ನ ಕೊಂಬುಗಳ ಅಂದವನ್ನು ನೋಡಿಕೊಳ್ಳುತ್ತಾ ನೀರು ಕುಡಿಯುತ್ತಿದೆ. ಕೊಳದ ತಡಿಯಲ್ಲಿ ಪಚ್ಚೆಯ ಹಾಸಿನಂತೆ ಸೊಂಪಾದ ಹಸುರು ಹುಲ್ಲು. ರತ್ನಗಂಬಳಿಯ ನಾಲ್ಕು ಕಡೆಗಳಲ್ಲಿಯೂ ಅಂದವಾಗಿ ಅಂಚು ಕಟ್ಟಿತ್ತು. ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಹೂವಿನ ದಂಡೆ ಗಳು, ನಡುನಡುವೆ ವರ್ಣವರ್ಣದ ಎಲೆಗಳು. ಆ ಕಸೂತಿ ಕೆಲಸ, ಅದರ ಬಣ್ಣ, ಎಲ್ಲವೂ ಅವಳ ಮನಸ್ಸಿಗೆ ಬಹಳ ಸಮರ್ಪಕವಾಗಿ ಕಂಡಿತು. ಅದು ನಡುಮನೆಯಲ್ಲಿದ್ದ ರತ್ನಗಂಬಳಿಯನ್ನೇ ಹೋಲುತ್ತಿತ್ತು. ಆಶ್ಚರ್ಯಾತಿ ರೇಕದಿಂದ ಅವಳ ಬಾಯಲ್ಲಿ ಮಾತೇ ಹೊರಡಲಿಲ್ಲ.

"ನೋಡೀಂದ್ರೆ, ಅದರ ತದ್ರೂಪು, ಅದನ್ನೇ ಮಾತಾಡುತ್ತಾ ಇದ್ದೆ, ಇವನೂ ಬಂದ" ಎಂದಳು. ನಂಜ ಸ್ವಲ್ಪ ನಕ್ಕ. ರಾಮನಾಥನು, "ಏನೋ, ಇದಕ್ಕೆಷ್ಟೋ" ಎಂದು ಕೇಳಿದ.

ಅವನು "ನೀವು ಕೇಳೀ, ಬುದ್ಧಿ," ಎಂದ.

"ಎಷ್ಟು ಹೇಳೋ"

ಅವನು ತೊದಲುತ್ತಾ ಹೇಳಿದ......"ಮೂವತ್ತೆರಡು.......ರೂ......"

ರಾಮನಾಥನ ಆಶ್ಚರ್ಯಕ್ಕೂ, ಆನಂದಕ್ಕೂ, ತುದಿಮೊದಲಿಲ್ಲ. ಅದೇ ಮಾದರಿಯ ರತ್ನಗಂಬಳಿಯನ್ನು ಕೊಳ್ಳುವಾಗ ಐವತ್ತನಾಲ್ಕೂ ಚಿಲ್ಲರೆ ರೂಪಾಯಿ ಕೊಟ್ಟಿದ್ದ. ಅದರಷ್ಟೇ ಚೆನ್ನಾಗಿದ್ದು ಅದೇ ಎನ್ನು ವಂತಿದ್ದ ರತ್ನಗಂಬಳಿಗೆ ಮೂವತ್ತೆರಡು ರೂಪಾಯಿ ಎಂದರೆ ಆಶ್ಚರ್ಯ ವಾಗುವುದಿಲ್ಲವೇ? ರಾಮನಾಥ ಅದಕ್ಕೆ ಏನು ಹೇಳಿದ್ದರೂ ಆಗ ಕೊಟ್ಟು ಬಿಡುತ್ತಿದ್ದ. ಏಕೆಂದರೆ ಅದು ತನ್ನ ಸರಳೆ ಮೆಚ್ಚಿದ್ದು. ತನ್ನವಳು ಮೆಚ್ಚಿದುದಕ್ಕೆ ಬೆಲೆ ಕಟ್ಟಲಾಗುವುದೇ?

ಸರಳೆ ಮತ್ತೆ, "ನೋಡೀಂಪ್ರೆ. ಈ ಅಂಚು ಎಷ್ಟು ಚೆನ್ನಾಗಿದೆ. ಎಳೆ ಹಸುರಿನ ಗರಿಕೆ ಹುಲ್ಲು, ತಿಳಿನೀರಿನ ಕೊಳ, ಕೊಂಕು ಕೊಂಬುಗಳ ಜಿಂಕೆ, ಎಲೆಯ ಮರೆಯ ಸೂರ್ಯ........" ಎಂದು ಬಣ್ಣಿಸಿದಳು. ಅವಳಿಗೆ ಅದನ್ನು ಎಷ್ಟು ವರ್ಣಿಸಿದರೂ ತೃಪ್ತಿಯಿಲ್ಲ.

ಅಂತೂ ಅವಳಿಗೆ ಸಂತಸವಾಯಿತಲ್ಲಾ ಎಂದು ರಾಮನಾಥನಿಗೂ ಸಂತೋಷವಾಯಿತು. ಮೂವತ್ತೈದು ರೂಪಾಯಿ ನೋಟುಗಳನ್ನು ಬಿಸುಟು, ಚಿಲ್ಲರೆ ತೆಗೆದುಕೊಳ್ಳುವುದನ್ನೂ ಆ ಆನಂದದಲ್ಲಿ ಮರೆತು ರತ್ನ ಗಂಬಳಿಯನ್ನು ಹೊತ್ತುಕೊಂಡು ಒಳಗೆ ನಡೆದ. ಸರಳೆ ಅವನನ್ನು ಹಿಂಬಾಲಿಸಿದಳು. ಹೋಗುತ್ತಾ ಚಾಪೆಯವನ ಮುಖವನ್ನು ಹಿಂತಿರುಗಿ ನೋಡಿದಳು. ಮುಖ "ಹರಳೆಣ್ಣೆ ಕುಡಿದ ಮುಖಮುದ್ರೆಯನ್ನು" ತಾಳಿತ್ತು. ಆದರೆ ಅದನ್ನು ಅವಳು ಅಷ್ಟಾಗಿ ಲಕ್ಷಿಸಿದಂತೆ ತೋರಲಿಲ್ಲ.

ಅವಳಿಗೆ ತನ್ನ ಮಗ ಬಾಲೂ ಹುಟ್ಟಿದ ಹಬ್ಬದಲ್ಲಿ ಸಂಜೆ ಆರುತಿ ಯಾಗುವಾಗ ಆ ಕಡೆಯೊಂದು, ಈ ಕಡೆಯೊಂದು ಹಾಸಬೇಕೆಂದು ಆಸೆಯಿತ್ತು. ಅವಳ ಆಸೆ ನೆರವೇರಿತು.

"ಅಲ್ಲಾ, ಈ ರತ್ನಗಂಬಳಿ ನಮಗೆ ಮೂವತ್ತೆರಡು ರೂಪಾಯಿಗೆ ಸಿಕ್ಕಿದ್ದು ನಮ್ಮ ಪುಣ್ಯ ಅಲ್ಲವೇ? ಹೊತ್ತಿಗೆ ಸರಿಯಾಗಿ ಸಿಕ್ಕಿತಲ್ಲ!"

"ಅವನೆಂಥ ದಡ್ಡ ಇದಕ್ಕೆ ಇಷ್ಟು ಕಡಿಮೆ ಬೆಲೆ ಹೇಳಿದ. ಅಂತೂ ನನಗೆ ಸಿಕ್ಕಿದ್ದು ಮುಖ್ಯ."

ರಾಮನಾಥ ನಲ್ಲೆಯ ನಗೆಮೊಗವನ್ನು ನೋಡಿ ನಲಿದನು. ಅವಳ ನಗೆಯಿಂದ ಮನೆಗೆ ಬೆಳದಿಂಗಳು ಬಂದಂತಾಗಿತ್ತು.

ಸರಳೆ ಹೊಸದಾಗಿ ಕೊಂಡಿದ್ದುದನ್ನೂ, ಮೊದಲಿದ್ದುದನ್ನೂ, ಒಮ್ಮೆ ಜೊತೆಯಲ್ಲಿ ಹಾಕಿ ನೋಡೋಣವೆಂದು ನಡುಮನೆಗೆ ಬಂದಳು. ಅಲ್ಲೇನಿದೆ? ಮೊದಲಿದ್ದ ರತ್ನಗಂಬಳಿ ಮಾಯ!

ಸರಳೆಯ ಮುಖ ಪೆಚ್ಚಾಯಿತು. ರಾಮನಾಥನಿಗೂ ಮಂಕು ಹಿಡಿಯಿತು. ನಂಜ ಅದಕ್ಕೆ ಅಷ್ಟು ಕಡಿಮೆ ಬೆಲೆ ಹೇಳಿದುದರ ಅರ್ಥ ವಾಯಿತು. ಕೋಪವೂ ಬಂದಿತು, ತಮ್ಮ ಮನೆಯದನ್ನು ಕದ್ದು ತಮಗೆ ಮಾರಿದನಲ್ಲಾ ಎಂದು. ಸರಳೆ ಉಂಗುಷ್ಟದಿಂದ ನೆಲವನ್ನು ಕೆರೆಯುತ್ತಾ, ಸೀರೆಯ ಅಂಚನ್ನು ತೀಡುತ್ತಾ ಅಧೋವದನೆಯಾಗಿದ್ದಳು.

"ನಾನಾಗಲೇ ಕೇಳಿದೆ, ಬೀದಿಯ ಬಾಗಿಲು ಹಾಕಿದ್ದೀಯಾಂತ. ಪಕ್ಕಾಕಳ್ಳ! ನೋಡಿದೆಯಾ ಮೂವತ್ತೈದು ರೂಪಾಯಿ ಅವನಿಗೆ ದಕ್ಕಿತು. ಬಿಡು ಅದರ ಜೊತೆಗೆ ಸಿಕ್ಕಿತಲ್ಲಾ ಎನ್ನುವ ಆನಂದದಲ್ಲಿ ಚಿಲ್ಲರೆ ತೆಗೆದುಕೊಳ್ಳುವುದನ್ನೂ ಮರೆತೆ."

ಸ್ವಲ್ಪ ಹೊತ್ತಿನ ಮೇಲೆ ಅವನ ಕೋಪವಿಳಿಯಿತು. ಚಾಪೆಯವನ ಜಾಣತನವನ್ನು ನೆನೆದು ನಕ್ಕ. ಸರಳೆಯೂ ನಕ್ಕಳು.

# ಬಿಡುಗಡೆ

"ಠಣ್, ಠಣ್, ಠಣ್...." ಎಂದು ಸೆರೆಮನೆಯ ಆವಾರದೊಳಗಿನ ಹಿತ್ತಾಳೆಯ ಹಲಗೆಯ ಮೇಲೆ ಎಂಟು ತಾಸು ಬಡಿಯಿತು. ಕೂಡಲೇ ದಾವೂದನು ತನ್ನ ವಿಚಾರದಿಂದ ಎಚ್ಚೆತ್ತು ಬಾಗಿಲಕಡೆ ನೋಡತೊಡಗಿದನು. ಕೀಲೀ ತಿರುಗಿಸುವ ಶಬ್ದವಾಯಿತು. ಬಾಗಿಲು ಕಿರೋ ಎಂದು ಸದ್ದುಮಾಡಿತು. ಒಡನೆ ಮುದಿ ಕಾವಲುಗಾರ ರಾಮಸಿಂಗನ ಹೆಜ್ಜೆಯ ಸಪ್ಪಳವಾಯಿತು. ಒಂದು ಕೈಯಲ್ಲಿ ಲಾಂದ್ರ, ಮತ್ತೊಂದು ಕೈಯಲ್ಲಿ ಕೆಲವು ಒಣರೊಟ್ಟಿಯ ತುಣುಕುಗಳು, ಒಂದು ಮರದ ಬಟ್ಟಲಲ್ಲಿ ಸ್ವಲ್ಪ ನೀರು ಹಿಡಿದುಕೊಂಡು ರಾಮಸಿಂಗ್ ಪ್ರವೇಶಿಸಿದನು.

ದಾವೂದ್ ಸಾತ್ವಿಕಸ್ವಭಾವದವನು. ಮೊದಲು ರೈತನಾಗಿದ್ದನು. ಬಡತನ....ಸುಖವಿತ್ತೋ ಇಲ್ಲವೊ....ಶಾಂತಿಯಂತೂ ಇತ್ತು. ತಂದೆ, ತಾಯಿ, ಅಣ್ಣ, ತಮ್ಮ, ಅವರ ಹೆಂಡತಿ ಮಕ್ಕಳು, ಅಕ್ಕತಂಗಿಯರು, ಅವರ ಗಂಡಂದಿರು, ಮಕ್ಕಳು, ತನ್ನ ಮಡದಿ ಮಕ್ಕಳು, ಮೊಮ್ಮಕ್ಕಳೊಡನೆ ಕೂಡಿ ಸಂಸಾರ ಸಾಗಿಸುತ್ತಿದ್ದನು. ಎಲ್ಲರೂ ತಮ್ಮ ಕೈಲಾದಷ್ಟು ದುಡಿಯುತ್ತಿದ್ದರು. ಎಲ್ಲರೂ ಸರಿಸಮವಾಗಿ ಉಣ್ಣುತ್ತಿದ್ದರು. ಆ ತುಂಬಿದ ಸಂಸಾರ, ಆ ತುಂಬಿದ ಬದುಕು ಎಷ್ಟು ಚೆನ್ನಾಗಿತ್ತು! ಅವನ ಪ್ರೀತಿಯ ಕಿರಿಯ ಮೊಮ್ಮಗ ಯುದ್ಧದಲ್ಲಿ ತೀರಿಹೋದಮೇಲೆ ರಜಪೂತರಿಗೂ, ಮೊಗಲರಿಗೂ ಆದ ಒಂದಾನೊಂದು ಯುದ್ಧದಲ್ಲಿ ಅವನು ಸತ್ತುಹೋದನು. ಆ ಯುದ್ಧದಲ್ಲಿ ಅವನು ಮೊಗಲರ ಕಡೆ ಇದ್ದನು. ಅವನಿಗೇಕೋ ಯುದ್ಧದ ಹುಚ್ಚು ಹಿಡಿಯಿತು. ದಾವೂದನಿಗೆ ತನ್ನ ಮೊಮ್ಮಗನಲ್ಲಿದ್ದ ಮಮತೆ, ಅವನು ಹೋದ ವ್ಯಥೆಗಳು ಇಡೀ ರಜಪೂತ ಜಾತಿಯಮೇಲಿನ ದ್ವೇಷವನ್ನು ತಾಳಿತು. ತನ್ನ ಐವತ್ತೇಳನೆಯ ವಯಸ್ಸಿನಲ್ಲಿ ಮೊಗಲ್ ಸೈನ್ಯವನ್ನು ಸೇರಿದನು. ವಯಸ್ಸಾಗಿದ್ದರೂ ಕಾಳಗದಲ್ಲಿ ಕಲಿತನದಿಂದ

ಕಾದಿದನು. ಕೆಲವು ವರ್ಷಗಳಲ್ಲೇ ಯಾವುದೋ ಒಂದು ಯುದ್ಧದಲ್ಲಿ ಶತ್ರುಗಳಿಗೆ ಸೆರೆಸಿಕ್ಕಿಬಿದ್ದನು. ಅವರು ಅವನಿಗೆ ಆಜೀವ ಕಾರಾಗೃಹವಾಸ ವನ್ನು ವಿಧಿಸಿದರು.

ದಾವೂದ್ ಸೆರೆಮನೆಗೆ ಬಂದು ಇಪ್ಪತ್ತು ವರ್ಷಗಳಾಗಿದ್ದುವು. ಅವನು ಒಳ್ಳೆಯವನು. ಬಹಳ ಒಳ್ಳೆಯ ರೀತಿಯಲ್ಲಿ ನಡೆದುಕೊಂಡಿದ್ದನು. ಎಂದೂ ಸೆರೆಮನೆಯ ನಿಯಮಗಳಿಗೆ ತಪ್ಪಿ ನಡೆದಿರಲಿಲ್ಲ. ಆದ್ದರಿಂದ ಅಲ್ಲಿಯ ಅಧಿಕಾರಿಗಳಿಗೂ ಆಳುಗಳಿಗೂ ಅವನಮೇಲೆ ತುಂಬಾ ವಿಶ್ವಾಸ ವಿತ್ತು. ಎಲ್ಲರೂ ಅವನನ್ನು 'ದಾದಾ' ಎಂದು ಕೂಗುತ್ತಿದ್ದರು. ಕಡೆ ಕಡೆಗೆ ಅವನ ನಿಜವಾದ ಹೆಸರೇ ಮರೆತುಹೋಯಿತು. ಅವನನ್ನು ಶತ್ರು ಪಕ್ಷದ ಸೆರೆಯಾಳಿನಂತೆ ಕಾಣದೆ ಗೌರವದಿಂದ, ಪ್ರೀತಿಯಿಂದ ಮಾತಾಡಿ ಸುತ್ತಿದ್ದರು. ಒಮ್ಮೊಮ್ಮೆ ರಾಮಸಿಂಗ್ ತನ್ನ ಊಟತಿಂಡಿಗಳಲ್ಲಿ ಕೊಂಚ ಪಾಲನ್ನು 'ದಾದಾ' ಒಲ್ಲೆನೆಂದರೂ ಬಿಡದೆ ತಂದುಕೊಡುತ್ತಿದ್ದನು. ಒಮ್ಮೊಮ್ಮೆ ಅವನ ವಿಶ್ವಾಸ, ಮಾತುಕತೆಗಳಿಂದ ತನ್ನ ಮಕ್ಕಳ ನೆನಪಾಗಿ ಕಣ್ಣಿನಲ್ಲಿ ನೀರೂರುತ್ತಿತ್ತು.

ದಾವೂದ್ ಹುಲ್ಲು ಹಾಸಿಗೆಯ ಮೇಲೆ, ತಲೆಯಮೇಲೆ ಕೈಹೊತ್ತು ಗಂಭೀರವಾಗಿ ಕುಳಿತಿದ್ದನು. ಮಾಸಿಹೋದ ಹಳದಿಯ ಬಣ್ಣದ ಪೈಜಾಮಾ, ಕಪ್ಪುಮನೆಯ ಬಿಳಿಯ ಬಣ್ಣದ ಹಳೆಯ ನಿಲುವಂಗಿ ಧರಿಸಿದ್ದನು. ತಲೆ ಬರಿದಾಗಿತ್ತು. ಬೋಳುತಲೆ, ಒಂದೇ ಒಂದು ಕೂದಲೂ ಇರಲಿಲ್ಲ. ಅಂದು ಬೆಳುದಿಂಗಳ ದಿನ. ಕಬ್ಬಿಣದ ಕಟಾಂಜನ ದಿಂದ ತೂರಿಬರುತ್ತಿದ್ದ ತಿಂಗಳ ಬೆಳಕಿನಲ್ಲಿ ಅವನ ತಲೆ ಮಿರುಮಿರನೆ ಮಿಂಚುತ್ತಿತ್ತು. ನರೆತ ದಾಡಿಯ ಬಿಳಿಗೂದಲು ಬೆಳ್ಳಿಗೂದಲಾಗಿ ಮಾರ್ಪಟ್ಟು ಥಳಥಳನೆ ಹೊಳೆಯುತ್ತಿತ್ತು. ವಿಷಾದದ ಛಾಯೆ ಮುಖ ವನ್ನಾವರಿಸಿತ್ತು.

"ದಾದಾ, ನೀನು ಸೆರೆಮನೆಗೆ ಬಂದು ಇಂದಿಗೆ ಸರಿಯಾಗಿ ಇಪ್ಪತ್ತು ವರ್ಷವಾಯಿತಲ್ಲವೇ?"

"ಹೌದು, ಆದರೇನು?"

"ದಾದಾ ನಿನಗೆ ಬಿಡುಗಡೆಯ ಆಸೆಯಿಲ್ಲವೇ?"

"ಏನು ಬಿಡುಗಡೆಯೋ? ಬಿಡುಗಡೆಯಾಗಿ ನಾನೇನು ಮಾಡಬೇಕಾಗಿದೆ?"

"ಹಾಗೇಕೆ ಹೇಳುವೆ? ಬೇಕಾದರೆ ನೋಡು, ನಾನೀದಿನ ನಿನ್ನನ್ನು ಬಿಡುಗಡೆ ಮಾಡಬಲ್ಲೆ."

"ಏನಂದೆ?"

"ನೀನು ಇಷ್ಟಪಟ್ಟರೆ ಇಲ್ಲಿಂದ ತಪ್ಪಿಸಿಕೊಂಡು ಹೋಗಬಹುದು. ನಾಳೆಯಿಂದ ನೀನು ನಾಲ್ಕು ಗೋಡೆಗಳ ಮಧ್ಯೆ ಬಂಧಿತನಾಗಿರಬೇಕಾಗಿಲ್ಲ. ಇತರರಂತೆ ಸ್ವಚ್ಛಂದವಾಗಿರಬಹುದು. ನಾನು ಸಹಾಯಮಾಡುತ್ತೇನೆ. ಯಾವ ತೊಂದರೆ ಬರಲಿ, ನಾನು ಲಕ್ಷಿಸುವುದಿಲ್ಲ. ಏನು ಹೇಳುವೆ? ಇಂಥಾ ಸಮಯ ಇನ್ನು ಮುಂದೆ ಸಿಕ್ಕುವುದಿಲ್ಲ."

"ಸಿಕ್ಕದಿದ್ದರೆ ಬೇಡ. ನನಗೆ ಬಿಡುಗಡೆಯ ಆಸೆಯೇ ಇಲ್ಲ. ಇಲ್ಲಿಂದ ತಪ್ಪಿಸಿಕೊಂಡು ಎಲ್ಲಿಗೆ ಹೋಗಲಿ? ನಿಲ್ಲಲು ನೆಳಲಿಲ್ಲ, ಕೂರಲು ತಾವಿಲ್ಲ. ನನ್ನವರೆನ್ನುವವರ್ಯಾರಿದ್ದಾರೆ? ನನಗೆ ಆಶ್ರಯಕೊಡುವವರ್ಯಾರಿದ್ದಾರೆ? ನಾನು ಯಾರಿಗಾಗಿ ಬದುಕಿರಬೇಕು? ಇಷ್ಟು ದಿನ ಕಳೆದಂತೆ ಮುಂದೂ ನನ್ನ ಉಳಿದ ಬಾಳನ್ನು ಸೆರೆಮನೆಯಲ್ಲೇ ಕಳೆಯುತ್ತೇನೆ. ಇದಕ್ಕೋಸ್ಕರ ನೀನೇಕೆ ತೊಂದರೆಪಡಬೇಕು, ಬೇಡ."

ರಾಮಸಿಂಗ್ ನಿರುತ್ತರನಾಗಿ ತಾನು ತಂದಿದ್ದ ರೊಟ್ಟಿಯ ಚೂರುಗಳನ್ನು ಅಲ್ಲಿದ್ದ ಹಿತ್ತಾಳೆಯ ತಣಿಗೆಗೆ ಸುರಿದು ನೀರಿಟ್ಟು ಬೀಗ ಹಾಕಿಕೊಂಡು ಹೊರಟುಹೋದನು.

ಮತ್ತೆ ನೀರವತೆಯ ರಾಜ್ಯ ಮೊದಲಾಯಿತು. ಅವನು ರೊಟ್ಟಿ ನೀರುಗಳ ಕಡೆಗೊಮ್ಮೆ ನೋಡಿ ತನ್ನ ದೃಷ್ಟಿಯನ್ನು ಬೇರೆಯ ಕಡೆಗೆ ತಿರುಗಿಸಿದನು. ಅವನಿಗೆ ಇಂದೇಕೋ ಹಸಿವೆ ತೋರಲಿಲ್ಲ.

ಅವನಿಗೆ ಎಂಭತ್ತರಮೇಲೆ ವಯಸ್ಸಾಗಿ ಹೋಗಿತ್ತು. ಇಷ್ಟರವೇಳೆಗೆ ಅವನು ಸತ್ತಿರಬೇಕಾಗಿತ್ತು. ಆದರೆ ದೇವರು ಅವನನ್ನಿನ್ನೂ ಜೀವದಿಂದಿಟ್ಟಿದ್ದನು. ಅವನು ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳನ್ನು ಸಮಾಧಿ ಮಾಡಿದ್ದನು. ಅವನಿನ್ನೂ ಬದುಕಿದ್ದನು. ಅವನು ಅಣ್ಣತಮ್ಮಂದಿರ, ಅಕ್ಕತಂಗಿಯರ, ಮಕ್ಕಳು ಮೊಮ್ಮಕ್ಕಳ ಜೀವನದಲ್ಲಿ ಸಹಭಾಗಿಯಾಗಿದ್ದನು.

ಅವರೆಲ್ಲಾ ತೀರಿಹೋದಮೇಲೂ ಬದುಕಿದ್ದಾನೆ. ಈ ಬದುಕು ಬರಿದಾಗಿತ್ತು, ನೀರಸವಾಗಿತ್ತು, ದುಃಖಪೂರ್ಣವಾಗಿತ್ತು. ಎಷ್ಟೋಸಾರಿ ಅವನು ವಿಶ್ರಾಂತಿಯನ್ನು ತನಗೆ ನೀಡೆಂದು ದೇವರನ್ನು ಬೇಡಿದ್ದನು. ದೇವರು ಅದನ್ನಿನ್ನೂ ಅವನಿಗೆ ದಯಪಾಲಿಸಿರಲಿಲ್ಲ. ಅವನು ಬದುಕಿ ಏನು ಮಾಡಬೇಕಾಗಿದೆ? ಆದರೂ ಬದುಕಿದ್ದಾನೆ....

ಅವನು ಹಾಸಿಗೆಯಿಂದ ಎದ್ದು ಕಟಾಂಜನದ ಬಳಿಗೆ ಬಂದು ಅದಕ್ಕೆ ಒರಗಿ ನಿಂತನು. ಅಸಂಖ್ಯನಕ್ಷತ್ರ ಪ್ರದೀಪ್ತವಾದ ಆ ಉಜ್ವಲರಜನಿ ಕಪ್ಪು ಮಕಮಲ್ಲಿನಮೇಲೆ ಬಿಳಿಯ ಮುತ್ತುಗಳನ್ನೂ, ರತ್ನಗಳನ್ನೂ ಚೆಲ್ಲಿದಂತಿತ್ತು. ಚಂದ್ರನು ತನ್ನ ಪೂರ್ಣಕಳೆಗಳಿಂದ ಸೌಮ್ಯವಾಗಿ ಪ್ರಕಾಶಿಸುತ್ತಿದ್ದನು. ಕೆಳಗೆ ಒತ್ತಾಗಿ ಬೆಳೆದ ಹಸುರು ಹುಲ್ಲು ಕಣ್ಣಿಗಿಂಪಾಗಿತ್ತು. ದೂರದ ಬೇಲಿಯ ಬಳಿ ಹಲವಾರು ಸಹಸ್ರ ಮಿಂಚುಹುಳುಗಳು ಗುಂಪುಗುಂಪಾಗಿ ಚಿತ್ರವಿಚಿತ್ರ ಗತಿಯಿಂದ ಹಾರಾಡುತ್ತಿದ್ದುವು. ಸ್ವಲ್ಪ ದೂರದಲ್ಲೇ ಕೆಲವು ಹೂಗಿಡಗಳು, ಬೆಳುದಿಂಗಳಲ್ಲಿ ಮಿಂದು ಸೊಬಗು ವಡೆದ ಕೆಂಪಾದ ಚಿಗುರೆಲೆಗಳು, ಹಸುರೆಲೆಗಳು, ನಂದಿವಟ್ಟಲ ಮೊಗ್ಗೆಗಳು, ಅರಳುತ್ತಿರುವ ಅಚ್ಚಗೆಂಪು ಗುಲಾಬಿಯ ಬಿರುಮುಗುಳುಗಳು. ಮಂದಮಂದವಾಗಿ ಸುಳಿದು ಬರುತ್ತಿದ್ದ ತಂಗಾಳಿಯಲ್ಲಿ ಅವುಗಳ ನರುಗಂಪು ತೇಲಿಬರುತ್ತಿತ್ತು. ಅದರೊಂದಿಗೇ ಮಧುರವಾದ ಶೋಕವೊಂದು ತೇಲಿ ಬರುತ್ತಿದ್ದಂತೆ ಅನುಭವವಾಯಿತು. ಆ ಸೊಬಗು, ಆ ಶಾಂತಿ ಅಪೂರ್ವವಾಗಿತ್ತು. "ಎಷ್ಟು ಸೊಗಸಾಗಿದೆ ಈ ರಾತ್ರಿ! ಏನು ಶಾಂತವಾಗಿದೆ! ಇನ್ನೊಂದು ವರ್ಷ ನಾನು ಬದುಕಿರುತ್ತೇನೆಯೇ?—ಇಂತಹ ಮತ್ತೊಂದು ಇರುಳನ್ನು ನಾನು ಕಾಣುತ್ತೇನೆಯೇ? ಯಾರು ಬಲ್ಲರು?....ದೇವರು ಬಲ್ಲ?........" ಎಷ್ಟೋ ಹೊತ್ತು ಅಲ್ಲಿಯೇ ನಿಂತಿದ್ದನು. ಪುನಃ ಹಾಸಿಗೆಯ ಮೇಲೆ ಬಂದು ಕುಳಿತನು.

ಎಲ್ಲಿಂದಲೋ ಒಂದು ಇಂಪಾದ ಸಂಗೀತಧ್ವನಿ ಸಣ್ಣಗೆ ಕೇಳಿಬರತೊಡಗಿತು. ಬರಬರುತ್ತಾ ಸ್ವರ ಸ್ಪಷ್ಟವಾಗಿ, ಮತ್ತೂ ಇಂಪಾಗಿ ಕೇಳಬರಲಾರಂಭಿಸಿತು. ಕೆಲವು ನಿಮಿಷಗಳಲ್ಲೇ ಮುದುಕನೊಬ್ಬನೂ ಹತ್ತು–ಹನ್ನೆರಡು ವರ್ಷದ ಹುಡುಗಿಯೊಬ್ಬಳೂ ಅವನ ಮುಂದೆ ಹಾದು ಹೋದರು. ಆ ಹುಡುಗಿಯೇ ಹಾಡುತ್ತಿದ್ದವಳು. ಅವರನ್ನು ನೋಡಿ

ತಾನು ಚಿಕ್ಕವನಾಗಿದ್ದಾಗ ತನ್ನ ಮುದಿ ಅಜ್ಜನೊಡನೆ ಸುತ್ತಾಡಲು ಹೋಗುತ್ತಿದ್ದುದು ನೆನಪಿಗೆ ಬಂತು. ತನ್ನ ಮಗಳು ಹಾಡುತ್ತಿದ್ದುದು ನೆನಪಾಯಿತು. ತಾನು ಮುಂಜಾನೆ ಹೊರಟು ಹಗಲೆಲ್ಲಾ ಹೊಲದಲ್ಲಿ ದುಡಿದು ಸಂಜೆ ದಣಿದು ಮನೆಗೆ ಬರುವಾಗ ಅವನ ಮಗಳ ಇಂಪಾದ ಗಾನ ಅವನಿಗೆ ಸ್ವಾಗತವನ್ನು ಬಯಸುತ್ತಿತ್ತು. ರಾಗಿಯನ್ನೋ ಅಕ್ಕಿಯನ್ನೋ ಬೀಸುತ್ತಾ ಎಷ್ಟು ಹಿತವಾಗಿ ಹಾಡುತ್ತಿದ್ದಳು? ಆ ಸಂಗೀತದಿಂದ ತನ್ನ ದಣಿವನ್ನೆಲ್ಲಾ ಮರೆಯಿಸುತ್ತಿದ್ದಳು. ಎಷ್ಟೋ ಸುಖವನ್ನುಂಟುಮಾಡುತ್ತಿದ್ದಳು. ಈಗ ಆ ಮಗಳು ಮೃತಳಾಗಿಹೋಗಿದ್ದಳು. ಕಣ್ಣಿನಲ್ಲಿ ನೀರುತುಂಬಿ ಮಬ್ಬಾಯಿತು. ಮೋಡ ಮುಸುಕಿ ಚಂದ್ರನು ಮರೆಯಾಗಿ ರಾತ್ರಿಯೂ ಮಬ್ಬಾಯಿತು.

ನೋವು, ದುಃಖ, ಗೆಯ್ಮೆ, ಚಿಂತೆ ಎಲ್ಲವನ್ನೂ ಅವನು ಕಂಡಿದ್ದನು. ಅವನ ಮನ ಅರಿಯದ ದುಃಖವಿರಲಿಲ್ಲ—ಸುಖ ಎಲ್ಲಿದೆ?—ಅವನು ಸುಖವನ್ನೂ ಉಂಡಿದ್ದನು—ಆದರೆ ಅದೆಲ್ಲೋ ಸ್ವಲ್ಪ ದಿನ ಮಾತ್ರ. ದುಃಖಪೂರ್ಣವಾದ ಆ ಅಗಣಿತ ದಿನಗಳ ಮುಂದೆ ಲೆಕ್ಕಕ್ಕೆ ಬಾರದು.

ಸಹನೆಯೇ ಮೂರ್ತಿಯಾಗಿದ್ದ ತನ್ನ ಮಡದಿಯನ್ನು ನೆನೆದನು. ತಾನೂ ಅವಳೂ ಸ್ವಚ್ಛಂದವಾಗಿ ಸುಖವಾಗಿದ್ದ ಯೌವನದ ದಿನಗಳನ್ನು ನೆನೆದನು. ತಾನವಳ ಒಲವಿನೋಪನಾಗಿ, ಅವಳು ತನ್ನ ನಲುಮೆಯನಲ್ಲೆಯಾಗಿ—ಆ ದಿನಗಳು ಎಷ್ಟು ಸುಖವಾಗಿತ್ತು? ಆದರೆ ಪಾಪ! ಬಡಪ್ರಾಣಿ, ಚಿಕ್ಕಂದಿನಲ್ಲೇ ಎಷ್ಟು ಕಷ್ಟಗಳನ್ನನುಭವಿಸಿದಳು, ಎಷ್ಟು ತಾಳ್ಮೆಯಿಂದ ಸಹಿಸಿದಳು? ಆ ನಿಷ್ಪಾಪಳಾದ ಹೆಂಗಸು ಮಾತಿಲ್ಲದೆ ಸಹಿಸಿದಳು. ತನ್ನಿಂದ ಅವಳಿಗೇನೂ ಸುಖ ದೊರೆಯಲಿಲ್ಲ. ಹುಡುಗಿಯಾಗಿದ್ದಾಗ ತುಂಬ ಚೆಲುವೆಯಾಗಿದ್ದಳು. ಅವನು ಅವಳಲ್ಲಿ ಕಂಡ ಚೆಲುವನ್ನು ಮತ್ತೆಲ್ಲೂ ಕಾಣಲಿಲ್ಲ. ಆದರೆ ಆ ಸೊಬಗು ಬೇಗನೆ ಮಾಸಿಹೋಯಿತು. ಮಿಂಚು ಎಷ್ಟು ಪ್ರಭಾಪೂರ್ಣವಾಗಿದೆಯೋ ಅಷ್ಟೇ ಕ್ಷಣಿಕವಾಗಿಯೂ ಇದೆ. ಅವಳ ಅನುಪಮರೂಪು ಬೇಗನೆ ಮಾಸಿಹೋಯಿತು. ಅನಿವಾರ್ಯವಾದ ಹೆಂಗಸಿನ ದುಃಖಗಳು ಅವಳ ಸೌಂದರ್ಯವನ್ನು ಹಾಳುಮಾಡಿದುವು. **ಹೊಳೆಯುವ ಬೊಗಸೆಗಣ್ಣು**ಗಳು ಗುಳಿಬಿದ್ದು ಕಾಂತಿಹೀನ

ನಾದುವು. ನೇರವಾದ ಬೆನ್ನು ಬಾಗಿತು. ಚಿಂತೆ ಮುಖದಲ್ಲಿ ಸುಕ್ಕನ್ನುಂಟುಮಾಡಿತು. ಚಿಂತೆ ಎಳೆಮೊಗವನ್ನೂ ಸುಕ್ಕುಮಾಡುತ್ತದೆ. ಅವಳು ತೀರಾ ಚಿಕ್ಕವಯಸ್ಸಿನಲ್ಲಿ ತೀರಿಹೋದಳು....ಅವಳ ಆತ್ಮಕ್ಕೆ ಶಾಂತಿಯುಂಟಾಗಲಿ....ಒಂದು ದಿನ ತಮ್ಮ ಕೈದೋಟದಲ್ಲಿ ಲತೆಯೊಡನೆ ಲತೆಯಾಗಿ ಹೂಬಿಡಿಸುತ್ತಿದ್ದುದನ್ನು ನೆನೆದನು. ಅನಂತರ ಮೃತ್ಯುಶಯ್ಯೆಯಲ್ಲಿ ಪವಡಿಸಿದ್ದ, ರೋಗದಿಂದ ಕೃಶವಾದ ಅವಳ ಶುಷ್ಕದೇಹ, ಸ್ನೇಹಪೂರಿತವಾದ ನೊಂದ ನೋಟಗಳನ್ನು ನೆನೆದನು.

ಕಣ್ಣಿನಿಂದ ಒಂದು ಹನಿ ತುಳುಕಿ ಕೆನ್ನೆಯಮೇಲೆ ಜಾರಿತು. ಅವನು ಆ ಗಹನವಾದ ವ್ಯಥೆಯಲ್ಲಿ ಎಷ್ಟೋ ಹೊತ್ತು ತಲ್ಲೀನನಾಗಿದ್ದುಬಿಟ್ಟನು.

ಶತ್ರುಗಳ ಆಯುಧಹತಿಯಿಂದ! ಶತಚ್ಛಿದ್ರವಾದ ಘೋರ ರಣರಂಗದಲ್ಲಿ ಇತರ ಶವಗಳ ಮಧ್ಯೆ ಬಿದ್ದಿದ್ದ ತನ್ನ ಕಿರಿಯ ಮೊಮ್ಮಗನ ಮುಖ ಜ್ಞಾಪಕಕ್ಕೆ ಬಂತು. ಮುಖವನ್ನು ತನ್ನ ಎರಡು ಕೈಗಳಿಂದಲೂ ಮುಚ್ಚಿಕೊಂಡು ಅತ್ತನು. ಭೀಷಣವಾದ ಆ ನೋಟದ ನೆನಪಿನಿಂದಲೇ ಮನಸ್ಸಿಗೆ ಎಷ್ಟೋ ತಾಪವಾಯಿತು.

ತನಗೆ ಬಗೆ ಬಗೆಯಾಗಿ ಅಪಕಾರಮಾಡಿದ, ತನ್ನನ್ನು ಎಷ್ಟೋವೇಳೆ ನೋಸಪಡಿಸಿದ ಹಣಗಾರನಾದ ತನ್ನ ದಾಯಾದಿ....ಈ ಪ್ರಪಂಚ ಎಷ್ಟು ಸ್ವಾರ್ಥಪರವಾದುದು, ಪಾಪಪೂರಿತವಾದುದು ಎನಿಸಿತು. ಅವನು ಹಲ್ಲುಕಡಿಯುತ್ತಾ ಗೋಡೆಗೆ ತನ್ನ ತಲೆ ಹೊಡೆದುಕೊಂಡನು.

ಸ್ನೇಹಿತನೊಬ್ಬನು ಬರಗಾಲದಲ್ಲಿ ದವಸಧಾನ್ಯಗಳನ್ನಿತ್ತು ತನ್ನನ್ನೂ ತನ್ನ ಕುಟುಂಬವನ್ನೂ ಕಾಪಾಡಿದನು. ಪ್ರತಿಫಲಾಪೇಕ್ಷೆಯಿಲ್ಲದೆ, ನೆಂಟರೆಲ್ಲಾ ಕೈಬಿಟ್ಟದ್ದಾಗ ಕಷ್ಟಕಾಲದಲ್ಲಿ ತನ್ನನ್ನು ಸಲಹಿದನು. ಕಣ್ಣೀರಿನ ರೂಪದಲ್ಲಿ ದಾವೂದ್ ತನ್ನ ಸ್ನೇಹದ ಕಾಣಿಕೆಯನ್ನು ಸಲ್ಲಿಸಿದನು. ಅದಕ್ಕಿಂತ ಹೆಚ್ಚಾವುದು?

ಒಂದು ಸಾರಿ ರಭಸದಿಂದ ಯುದ್ಧವಾಗುತ್ತಿತ್ತು. ಅವನು ಬಹಳ ಹೊತ್ತು ಯುದ್ಧಮಾಡಿ ಬಳಲಿದ್ದನು. ಎದುರಾಳಿಯ ಆಯುಧಹತಿಯಿಂದ ಮೂರ್ಛಿತನಾಗಿ ಕೆಳಗೆ ಬಿದ್ದನು. ಮನಸ್ಸುಮಾಡಿದ್ದರೆ ಎದುರಾಳಿ

ಅಸಹಾಯುತಾವಸ್ಥೆಯಲ್ಲಿದ್ದ ಅವನನ್ನು ಕೊಲ್ಲಬಹುದಾಗಿತ್ತು. ಆದರವನು ಹಾಗೆ ಮಾಡದೆ ದೇವಯೋಗ್ಯವಾದ ದಯೆಯಿಂದ ಅವನನ್ನೆತ್ತಿ ಕುದುರೆಯ ಮೇಲೆ ಹಾಕಿಕೊಂಡು ಶಿಬಿರಕ್ಕೆ ಕೊಂಡೊಯ್ದು ಉಪಚರಿಸಿದನು. ಅವನ ಪ್ರಾಣವನ್ನು ರಕ್ಷಿಸಿದನು. ದಯಾಶಾಲಿಯಾದ ಆ ಯುವಕನು ಎಲ್ಲಿಯಾದರೂ ಸುಖವಾಗಿರಲಿ.

ಅವೆಲ್ಲಾ ಎಷ್ಟೋ ಕಾಲದ ಹಿಂದೆ ನಡೆದವುಗಳು. ಅವೆಲ್ಲಾ ನಿನ್ನೆ ಮೊನ್ನೆ ನಡೆದಂತೆ ತೋರಿದುವು. ಅವನು ಅಂದು ಅತ್ತಷ್ಟು ಹಿಂದೆಂದೂ ಅತ್ತಿರಲಿಲ್ಲ. ಅವನ ಸುಪ್ತಚಿತ್ತದಲ್ಲಿ ಮಲಗಿದ್ದ ಘಟನೆಗಳು ಪದೇ ಪದೇ ನೆನಪಿಗೆ ಬಂದು ಅವನ ಮನಶ್ಶಾಂತಿಯನ್ನು ಚದುರಿಸುತ್ತಿದ್ದುವು.

ಅತ್ತು ಅತ್ತು ಸಾಕಾಯಿತು. ಅವನಿಗೆ ತುಂಬ ದಣಿವಾಯಿತು. ಸ್ವಲ್ಪ ಜಂಪು ಹತ್ತಿದಂತಾಯಿತು. ಮತ್ತೆ ಎಚ್ಚರವಾಯಿತು. ಆ ರಾತ್ರಿ ರಾಮಸಿಂಗ್ ತಾನು ಇಷ್ಟಪಟ್ಟಲ್ಲಿ ತನ್ನನ್ನು ಬಿಡುಗಡೆ ಮಾಡುವುದಾಗಿ ಹೇಳಿದುದೂ, ಅವನ ವಿಶ್ವಾಸದ ಮಾತುಗಳೂ ನೆನಪಾದುವು.

ಹೊರಗೆ ನೋಡಿದನು. ಬೆಳುದಿಂಗಳು ಮೆಲ್ಲ ಮೆಲ್ಲನೆ ಜಾರುತ್ತಿತ್ತು. ನಕ್ಷತ್ರಗಳ ಬೆಳಕು ಮಸಕಾಗಿತ್ತು. ತಂಗಾಳಿ ಸುಖವಾಗಿ ಬೀಸುತ್ತಿತ್ತು. ಬೆಳಕು ಹರಿಯಲು ಇನ್ನು ಬಹಳ ಸಮಯ ಉಳಿದಿರಲಿಲ್ಲ.

ದಾವೂದ್ ಮಂಡಿಯೂರಿ ಕೈಜೋಡಿಸಿ ಪ್ರಾರ್ಥನೆ ಮಾಡಿದನು. ಬಹಳ ಹೊತ್ತು ಧ್ಯಾನ ಮಾಡಿದನು. ಮನಸ್ಸಿಗೆ ಏನೋ ಒಂದು ಬಗೆಯ ಸಮಾಧಾನವಾಯಿತು. ಶಾಂತಿಯ ನಗೆ ಮುಖವನ್ನು ಬೆಳಗಿತು. ಹಾಗೆಯೇ ಧ್ಯಾನಮಾಡುತ್ತಲೇ ಇದ್ದನು.

ಮರುದಿನ ಬೆಳಿಗ್ಗೆ ರಾಮಸಿಂಗ್ ಅವನಿಗೆ ಆಹಾರ ಕೊಡಲು ಬಂದನು. ದಾದಾ ಮಂಡಿಯೂರಿ ಕೈಜೋಡಿಸಿ ಧ್ಯಾನಮಗ್ನನಾಗಿದ್ದನು. "ದಾದಾ, ದಾದಾ...." ಎಂದು ಎರಡು ಮೂರು ಸಾರಿ ಕೂಗಿದನು. ದೇಹ ಅತ್ತಿತ್ತ ಅಲುಗಲಿಲ್ಲ. ನೀರವ, ನಿಷ್ಪಂದ. ಅವನಿಗೆ ಆಶ್ಚರ್ಯವಾಗಿ ಮೈಮುಟ್ಟಿ ನೋಡಿದನು. ದೇಹ ತಣ್ಣಗಾಗಿಹೋಗಿತ್ತು. ಅವನ ನಿರ್ಮಲವಾದ ಆತ್ಮ ದೇಹಪಂಜರದಿಂದ ಬಿಡುಗಡೆಯಾಗಿಹೋಗಿತ್ತು! ಹಿಂದಿನಿರುಳ ಅದೇ ಶಾಂತವಾದ ನಗೆ ಮುಖದಲ್ಲಿ ಮೂಡಿತ್ತು.

# ಹಂಬಲು

“ ರೇಣು, ಏನು ಮಾಡುತ್ತಿರುವಿಯೋ ? ”

“ ಮೊಗ್ಗು ಕಟ್ತಿದೀನಿ········”

“ ಅದೆಷ್ಟು ಹೊತ್ತಿನಿಂದ ಕಟ್ತಿದೀ ? ಸ್ವಲ್ಪ ಉಪಕರಣೆ ಪಾತ್ರೆ ತೊಳೆದುಕೊಡಬಾರದೇ ? ”

ರೇಣು, ಹೂಂ ಎಂದು ಉತ್ತರಕೊಟ್ಟಳಷ್ಟೆ. ಕುಳಿತಲ್ಲಿಂದ ಏಳಲಿಲ್ಲ. ಸಾವಿತ್ರಮ್ಮ ಕಸ ಆಚೆಗೆ ಸುರಿಯಬೇಕೆಂದು ನಡುಮನೆಯಿಂದ ಹಾದು ಹೋದರು. ರೇಣುಕೆಯ ಮುಂದೆ ಅರ್ಧಮಟ್ಟದವರೆಗೆ ನೀರುತುಂಬಿದ್ದ ಒಂದು ಅಗಲವಾದ ಬೆಳ್ಳಿ ತಟ್ಟೆಯಿತ್ತು. ನೀರಿನಮೇಲೆ ಹೊಚ್ಚ ಹೊಸ ಪಾದ ದುಂಡುಮಲ್ಲಿಗೆಯ ಬಿರುಮೊಗ್ಗೆಗಳು. ಸರಸರನೆ ಅತಿ ನಿಪುಣತೆ ಯಿಂದ ಅಂದವಾಗಿ ದಂಡೆ ಕಟ್ಟುತ್ತಿದ್ದಳು. ಮಗಳ ಕೈಗಳು ಕಟ್ಟುವುದ ರಲ್ಲಿ ಎಷ್ಟು ಬೇಗನೆ ಓಡುತ್ತದೆಂದು ನೋಡುತ್ತ, ನೋಡುತ್ತ, ಅವಳ ಆ ಕೌಶಲ, ಕಟ್ಟುವುದರಲ್ಲಿನ ಆ ಬೆಡಗು, ಆ ಅಂದಗಳನ್ನು ನೋಡುತ್ತ ನೋಡುತ್ತ ತಾವು ಬಂದ ಕೆಲಸವನ್ನೇ ಮರೆತು ನಿಂತರು. ಅರೆಕ್ಷಣ ಅವರ ಹೃದಯ ಹೆಮ್ಮೆಯಿಂದ ತುಂಬಿತು.

ರೇಣು ತಲೆಯೆತ್ತಿ ಹೇಳಿದಳು : “ ನೋಡಮ್ಮ, ಈ ದಂಡೆ ನಿನಗೆ, ಇದು ನನಗೆ. ಈಗ ಕಟ್ಟುತ್ತಿರುವುದು ಶಾರದಮ್ಮನಿಗೆ. ಶಾಸ್ತ್ರಿಗಳ ಮಗಳು ಶಾರದಮ್ಮ ಬಾಣಂತನಕ್ಕೆ ತೌರುಮನೆಗೆ ಬಂದಿದ್ದಾಳೆ. ಅವಳಿಗೆ ಮೊದಲಿ ನಿಂದ ಮಲ್ಲಿಗೇ ಹೂವು ಎಂದರೆ ಪ್ರಾಣ. ಈಗ ಬಸುರಿ, ಪಾಪ ಬಯಕೆ ಯಿರುವುದಿಲ್ಲವೇ ? ಅಮ್ಮಾ, ಇದನ್ನವಳಿಗೆ ಕೊಟ್ಟು ಬರುತ್ತೇನೆ. ಹಾಗೆಯೇ ಎರಡು ಮಾಗಿದ ಸೀಬೇಹಣ್ಣನ್ನೂ ತಗೊಂಡುಹೋಗುತ್ತೇನೆ.”

ಸಾವಿತ್ರಮ್ಮ ಸೆರಗಿನಿಂದ ತಮ್ಮ ಕಣ್ಣೀರನ್ನೊರಸಿಕೊಂಡು ಒಳಗೆ ಹೋದರು. ಅವಳು ಕಟ್ಟುವುದು ಪೂರೈಸಿತು. ಕಪ್ಪನೆಯ ಕಬ್ಬಿಣವು ಸ್ಪರ್ಶಮಣಿಯ ಸೋಂಕಿನಿಂದ ಹೊಳೆಹೊಳೆವ ಹೊನ್ನಾಗುವಂತೆ, ಕಿಲುಬು ಹಿಡಿದಿದ್ದ ಪಾತ್ರೆಗಳೂ, ಅವಳು ಉಜ್ಜಲಾರಂಭಿಸಿದೊಡನೆ ಕನ್ನಡಿಯಂತೆ,

ಕಾಸಿದ ಚಿನ್ನದಂತೆ ಥಳಥಳಿಸಲಾರಂಭಿಸಿದುವು. ಒಗೆಯುವ ಕಲ್ಲಿನ ಮೇಲೆ ಸಾಲಾಗಿಟ್ಟ ಆ ಪಾತ್ರೆಗಳ ಮೇಲೆ ಹೊಂಬಿಸಿಲು ಬಿದ್ದು ಅವಕ್ಕೆ ಮತ್ತಷ್ಟು ಶೋಭೆಯನ್ನುಂಟುಮಾಡಿತು. ಅವನ್ನು ನೋಡಿ ಪುನಃ ಸಾವಿತ್ರಮ್ಮನವರ ಕಣ್ಣುಗಳು ನೀರಿನಿಂದ ತುಂಬಿದುವು.

ರೇಣುಕೆ ಹೆರಳು ಹಾಕಿಕೊಳ್ಳಲು ತನ್ನ ಕೋಣೆಗೆ ಹೋದಳು. ಅವಳ ನೀಳ್ಗೂದಲು ಮೊಣಕಾಲವರೆಗೆ ಬರುತ್ತಿತ್ತು. ನಿರ್ಮಲವಾದ ಕೊಬ್ಬರಿ ಯೆಣ್ಣೆ ಹಚ್ಚಿಕೊಂಡು ಬಾಚಿ ಹೆರಳು ಹೆಣೆದುಕೊಂಡಳು. ಬಟ್ಟಹಣೆಯ ಮೇಲೆ ತಿದ್ದಿ ತಿದ್ದಿ ಕುಂಕುಮವಿಟ್ಟಳು. ತಾನೇ ಒಗೆದು ಮಡಿಸಿಟ್ಟ ತಿಳಿ ಹಸುರು ಸೀರೆಯನ್ನು ಅಂದವಾಗಿ ನೆರಿ ಹಿಡಿದು ಉಟ್ಟಳು. ಮಲ್ಲಿಗೆಯ ಮೊಗ್ಗಿನ ದಂಡೆಯನ್ನು ಮುಡಿದು, ನಿಲುವುಗನ್ನಡಿಯ ಮುಂದೆ ನಿಂತು ಅಡಿಯಿಂದ ಮುಡಿಯವರೆಗೆ ತನ್ನ ಅಂದವನ್ನು ತಾನೇ ದಿಟ್ಟಿಸಿನೋಡಿ ಹಿಗ್ಗಿದಳು. ರೇಣು ಕಡು ಚೆಲುವೆ. ಅವಳಿಗಿನ್ನೂ ಹನ್ನೆರಡು ವರ್ಷದ ಎಳೆಪ್ರಾಯ. ವಯಸ್ಸಿಗೆ ಮೀರಿದ ಎತ್ತರವಾದ ನಿಲುವು, ಚೆಲುವಾದ ತುಂಬಿದ ಮೈಕಟ್ಟು, ಬಟ್ಟಮೊಗ—ಅಲ್ಲಿ ಚೆಲುವು, ನಲವು, ಗೆಲವುಗಳು ಮೂರೂ ಕೂಡಿಯೇ ಹರಿಯುತ್ತವೆ.

ಹಿಂದೆ ನಿಂತು ನೋಡಿದ ಅವಳ ತಾಯಿ ಒಳಗೇ ನೊಂದುಕೊಂಡು ನಿಟ್ಟುಸಿರಿಟ್ಟರು. ಒಂದು ತಟ್ಟೆಯಲ್ಲಿ ಮೊಗ್ಗಿನ ದಂಡೆಯನ್ನೂ, ಸೀಬೆಯ ಹಣ್ಣುಗಳನ್ನೂ ಇಟ್ಟುಕೊಂಡು ನಗುನಗುತ್ತಾ, "ಹೋಗಿ ಬರ್ತೀನಮ್ಮಾ" ಎಂದು ಹೇಳಿ ಶಾಸ್ತ್ರಿಗಳ ಮನೆಗೆ ಹೋದಳು. ಅವಳ ಎಳೆಯೆದೆಗೆ ಹೇಗೆ ಅರಿವಾಗಬೇಕು—ತಾಯಿ ತನಗಾಗಿ ಕಣ್ಣೀರು ಮಿಡಿದುದು, ನಿಟ್ಟುಸಿರು ಇಟ್ಟುದು?

* * *

ರೇಣು ಸಾವಿತ್ರಮ್ಮನವರಿಗೆ ಒಬ್ಬಳೇ ಮಗಳು. ಅವಳ ಪೂರ್ತಿ ಹೆಸರು ರೇಣುಕಾದೇವಿ. ಆದರೆ ಮುದ್ದಿನ ಹೆಸರು ರೇಣು. ಆ ಗ್ರಾಮದಲ್ಲಿ ಯಾರೂ ಅವಳನ್ನು ರೇಣುಕಾದೇವಿ ಎಂದು ಕರೆಯುವುದಿಲ್ಲ. ರೇಣು ಎಂತಲೇ ಕರೆಯುವರು. ಅವಳಿಗೂ ಅದೇ ಹೆಸರಿನಿಂದ ಕರೆಸಿಕೊಳ್ಳುವುದು

ಇಷ್ಟ. ಸಾವಿತ್ರಮ್ಮ ಮತ್ತು ರಂಗಪ್ಪನವರು ಅವಳನ್ನು ಬಹಳ ಪ್ರೀತಿಯಿಂದ ಸಾಕಿದ್ದರು. ಆದರೆ ಅವರು ಸಂಪ್ರದಾಯ ಶರಣರು, ತುಂಬ ನಿಷ್ಠಾವಂತರು. ರೇಣುಕೆಗೆ ಎಂಟು ವರ್ಷ ತುಂಬುವುದಕ್ಕೆ ಬಹಳ ಮುಂಚಿತವಾಗಿಯೇ ಮದುವೆ ಮಾಡಿದ್ದರು. ಹಾಗೆಂದರೆ ಆ ಅರಿಯದ ಕಂದಮ್ಮನನ್ನು ಅರುವತ್ತು ವರುಷದ ಮುದಿಗೊರಡಿನ ಕೊರಳಿಗೆ ಬಿಗಿದಿದ್ದರೆಂತಲ್ಲ. ಗಂಡಿಗೆ ಇನ್ನೂ ಹದಿನೇಳು ವರ್ಷವಾಗಿತ್ತು. ಅವನೂ ಲಕ್ಷಣವಾಗಿದ್ದನು. ಅವನ ಗುಣ ಅವರ ಮನಸ್ಸಿಗೆ ಹಿಡಿದಿತ್ತು. ಹುಡುಗನ ತಂದೆತಾಯಿಗಳೂ ಒಳ್ಳೆಯ ಜನ, ಅನುಕೂಲಸ್ಥರು. ಇಷ್ಟೆಲ್ಲಾ ನೋಡಿಯೇ ಮಗಳನ್ನು ಕೊಟ್ಟು ಮದುವೆ ಮಾಡಿದ್ದರು. ಆದರೆ ರೇಣುಕೆಯ ದೌರ್ಭಾಗ್ಯದಿಂದ ಮದುವೆಯಾಗಿ ತಿಂಗಳಾಗುವುದಕ್ಕೆ ಮೊದಲೇ ಅವನು ಯಾವುದೋ ಕೆರೆಯಲ್ಲಿ ಈಜುವುದಕ್ಕೆ ಹೋಗಿ ಮುಳುಗಿ ಸತ್ತನು. ಅವನು ಅಳಿದಂತೆಯೇ ಅವನ ನೆನಪು ಅವಳ ಮನಸ್ಸಿನಿಂದ ಅಳಿಸಿಹೋಯಿತು.

ಮಗಳ ವೈಧವ್ಯದಿಂದ ಅವಳ ತಾಯ್ತಂದೆಗಳಿಗೆ ಉಂಟಾದ ದುಃಖ ಅಷ್ಟಿಷ್ಟಲ್ಲ. ಅವರ ಹೃದಯಕ್ಕೆ ಬರೆ ಕೊಟ್ಟಂತಾಗಿತ್ತು. ಒಬ್ಬಳೇ ಮಗಳು. ಅವಳ ಗತಿ ಹೀಗಾಗಬೇಕೇ? ಆದರೆ ಆ ಚಿಕ್ಕ ಹುಡುಗಿಯ ಮೇಲೆ ಇದಾವ ಪರಿಣಾಮವನ್ನೂ ಉಂಟುಮಾಡಿರಲಿಲ್ಲ. ಮದುವೆಯೆಂದರೇನು? ಗಂಡನೆಂದರೇನು? ಎಂಬುದನ್ನು ತಿಳಿಯದ ವಯಸ್ಸು ಅವಳಿಗೆ ತನಗುಂಟಾದ ನಷ್ಟವೇನೆಂದು ತಿಳಿದಿರಲಿಲ್ಲ. ಆ ಮದುವೆಯಲ್ಲೊಮ್ಮೆ ಗಂಡನನ್ನು ನೋಡಿದ್ದು, ಅದೂ ಸರಿಯಾಗಿ ನೋಡಿರಲಿಲ್ಲ. ಗಂಡನ ಮೇಲಿನ ನೋಟಕ್ಕಿಂತ ಗೆಳತಿಯರೊಡನೆ ಓಡಾಟ, ಆಟ, ಊಟ, ಕೂಟಗಳ ಮೇಲಿನ ನೋಟ ಹೆಚ್ಚಾಗಿತ್ತು. ಆಮೇಲೆ ಅವನನ್ನು ನೋಡಲಿಲ್ಲ. ಆಮೇಲಾದರೋ ಎಷ್ಟೋ ಜನ ಗಂಡಸರನ್ನು ನೋಡಿದಳು. ಆ ಚಿಕ್ಕಹುಡುಗಿ ಅಂದು ಗಂಡನೊಡನೆ ಬೀರಿದ ನೋಟದ ಭಾವಕ್ಕೂ, ನಿರ್ಮಲ ಮನಸ್ಸಿನಿಂದ ಇತರ ಗಂಡಸರನ್ನು ನೋಡಿದ ಭಾವಕ್ಕೂ ಯಾವ ಅಂತರವೂ ಇರಲಿಲ್ಲ. ತಿಳಿಯದ ಹುಡುಗಿ, ಪಾಪ! ಗಂಡ ಹೋದಮೇಲೂ ಹೂ ಮುಡಿಯುವುದನ್ನೂ, ಕುಂಕುಮವಿಟ್ಟುಕೊಳ್ಳುವುದನ್ನೂ, ಅಲಂಕಾರ ಮಾಡಿಕೊಳ್ಳುವುದನ್ನೂ ಬಿಡಲಿಲ್ಲ. ತಾಯ್ತಂದೆಗಳೂ, "ಅರಿಯದ ಮಗು, ಪಾಪ! ಏನೋ ಆಸೆ,

ನಾಲ್ಕು ದಿನ ಅಲಂಕಾರ ಮಾಡಿಕೊಳ್ಳುತ್ತಾಳೆ" ಎಂದು ಸುಮ್ಮನಾಗಿದ್ದರು. ಎಷ್ಟಾದರೂ ಹೆತ್ತ ಕರುಳು. ಅಷ್ಟೇ ಅಲ್ಲ, ಮಗಳು ಕುಂಕುಮವಿಟ್ಟು ಕೊಳ್ಳುವುದನ್ನು ಮರೆತ ದಿನ ತಾವೇ ಅವಳಿಗೆ ಕುಂಕುಮವಿಟ್ಟಿದ್ದರು. ಎಷ್ಟೋ ವೇಳೆ ತಾವೇ ಹೆರಳುಹಾಕಿ ಅಲಂಕರಿಸುತ್ತಿದ್ದರು. ಆದರೆ ಒಳಗೇ ಕೊರಗುತ್ತಿದ್ದರು. ರೇಣು ತಾನೂ ಜೊತೆಯ ಹುಡುಗಿಯರೊಡನೆ ಆಟ ಪಾಡಿಕೊಂಡಿದ್ದಳು. ನಾಲ್ಕು ವರ್ಷದ ಹಿಂದಿನ ನೆನಪು ಅವಳಲ್ಲುಳಿ ದಿರಲಿಲ್ಲ.

ರೇಣು ಎಲ್ಲರಂತಿದ್ದರೆ ಸಾವಿತ್ರಮ್ಮನವರಿಗೆ ಇಷ್ಟು ವ್ಯಥೆಯಾಗುತ್ತಿರ ಲಿಲ್ಲ. "ಎಷ್ಟೋ ಹುಡುಗಿಯರು ಗಂಡನನ್ನು ಕಳೆದುಕೊಳ್ಳುವುದಿಲ್ಲವೇ! ಇವಳೂ ಹಾಗೆಯೇ. ಅವರವರ ಕರ್ಮ ಅನುಭವಿಸಿದಲ್ಲದೆ ತೀರದು" ಎಂದು ಸಮಾಧಾನ ಮಾಡಿಕೊಂಡಿರಬಹುದಾಗಿತ್ತೇನೋ. ಆದರೆ ಅವಳ ರೂಪು, ಗುಣ, ನಡೆನುಡಿಗಳನ್ನು ನೋಡಿ ನೋಡಿ ಅವರ ವ್ಯಥೆ ಹೆಚ್ಚುತ್ತಿತ್ತು. ಸಾವಿತ್ರಮ್ಮನವರು, "ಈಗಲೇ ಇವಳಿಷ್ಟು ಚೆಲುವಾಗಿದ್ದಾಳೆ. ನನಗೇ ಎರಡು ಗಳಿಗೆ ನಿಂತು ನೋಡಬೇಕೆನಿಸುತ್ತದೆ. ಅವಳನ್ನೆಷ್ಟು ನೋಡಿದರೂ ತಣಿಯುವುದಿಲ್ಲ. ಇನ್ನು ತುಂಬು ಹರಯದಲ್ಲಿ ಎಷ್ಟು ಚೆಲುವಾಗಿರ ಬಹುದು" ಎಂದುಕೊಳ್ಳುತ್ತಿದ್ದರು. ಅವಳು ಸ್ಕೂಲಿಗೆ ಹೋಗುತ್ತಿರಲಿಲ್ಲ. ಮನೆಯಲ್ಲೇ ತಂದೆಯ ಬಳಿ ಸ್ವಲ್ಪ ಓದುಬರಹ ಕಲಿತಿದ್ದಳು. ಅವಳೇನೂ ಪಂಡಿತೆಯಲ್ಲ. ಆದರೂ ಅವಳ ತಿಳಿಮಾತುಗಳು ಎಲ್ಲರ ಮನಸ್ಸನ್ನೂ ಸೆಳೆಯುತ್ತಿದ್ದುವು. ಅವಳು ಯಾವ ಘನ ಸಂಗೀತವಿದ್ವಾಂಸರ ಬಳಿಯಲ್ಲೂ ಸಂಗೀತವನ್ನು ಕಲಿತಿರಲಿಲ್ಲ. ಆದರೆ ಪ್ರಕೃತಿಯೇ ಅವಳಿಗೆ ಗುರು. ದೇವರೇ ಅವಳಿಗೆ ಇನಿಗೊರಲನ್ನು, ಸಂಗೀತವನ್ನು ವರವಾಗಿ ಕೊಟ್ಟಿದ್ದನು. ತನಗೆ ಬಂದ ಕೆಲವು ಹಾಡುಗಳನ್ನೇ ಇಂಪಾಗಿ ಹಾಡುತ್ತಿದ್ದಳು! ಹರಿದಾಸರ ಕನ್ನಡ ಪದಗಳು, ದೇವರ ನಾಮಗಳು ಅವಳಿಗೊಳ್ಳೆಯ ಮೆಚ್ಚುಗೆ ಯಾಗಿದ್ದುವು.

ಆ ಎಳೆಯ ವಯಸ್ಸಿನಲ್ಲೇ ಮನೆಗೆಲಸವನ್ನೆಲ್ಲಾ ಕಲಿತಿದ್ದಳಾಕೆ. ಆಕೆ ಮಾಡುತ್ತಿದ್ದುದು ನಳಪಾಕ. ಅಡಿಗೆಯೊಂದರಲ್ಲೇ ಎಂದಲ್ಲ. ಪ್ರತಿ ವಿಷಯದಲ್ಲೂ ರೇಣು ರತ್ನ. ಸಾವಿತ್ರಮ್ಮ ಮತ್ತು ರಂಗಪ್ಪನವರಿಗೆ

ರೇಣುಕೆಯೇ ಕಣ್ಣಬೆಳಕಾಗಿದ್ದಳು. ರಂಗಪ್ಪನವರಿಗಂತೂ ಅವಳು ನಗೆ ಮೊಗದಿಂದ "ಅಪ್ಪಾ" ಎನ್ನುತ್ತಲೇ ಎಲ್ಲ ಶ್ರಮವೂ ಪರಿಹಾರ ವಾಗುತ್ತಿತ್ತು.

ಯಾರ ಮಕ್ಕಳನ್ನಾದರೂ ಸರಿಯೆ, ತನ್ನದೇ ಎಂಬಷ್ಟು ಮಮತೆ ಯಿಂದ ರೇಣು ಮುದ್ದಾಡುತ್ತಿದ್ದಳು. ಎಂಥ ಹಟಮಾರಿ ಮಗುವನ್ನಾದರೂ ಪರಮ ಸಾಧುವಾಗಿ ಮಾರ್ಪಡಿಸುತ್ತಿದ್ದಳು. ಮಕ್ಕಳೂ ಸಹ ಇವಳಿಂದ ಆಕರ್ಷಿತವಾಗುತ್ತಿದ್ದುವು. ಚಿಕ್ಕಂದಿನಿಂದಲೂ ಅವಳಿಗೆ ಮುಂದೆ ತಾನು ಚೆನ್ನಾಗಿ ಸಂಸಾರ ಮಾಡಬೇಕೆಂದೂ, ಚೆನ್ನಾಗಿ ಬದುಕಿ ಬಾಳಬೇಕೆಂದೂ, ತನಗೆ ತುಂಬ ಮಕ್ಕಳಾಗಬೇಕು, ಅವನ್ನು ಚೆನ್ನಾಗಿ ಸಾಕಬೇಕು ಎಂತಲೂ ಏನೇನೋ ಹಂಬಲುಗಳು. ಏನೇನೋ ಹೊಂಗನಸುಗಳನ್ನು ಆಕೆ ಹೆಣೆಯು ತ್ತಿದ್ದಳು. ಅಲ್ಲದೆ ತಾನು ಚೆನ್ನಾಗಿ ಸಂಸಾರ ಮಾಡಬಲ್ಲೆ, ಚೆನ್ನಾಗಿ ಮಕ್ಕಳನ್ನು ಸಾಕಬಲ್ಲೆ ಎಂಬ ಆತ್ಮವಿಶ್ವಾಸವೂ ಅವಳಿಗಿತ್ತು. ಅವಳು ವಿಧವೆಯಾಗದಿದ್ದರೆ ಸೇರಿದ ಮನೆಗೆ ಸಂದ ಸಿರಿಯಾಗಿ, ಗೃಹಲಕ್ಷ್ಮಿಯಾಗ ಬಹುದಾಗಿತ್ತೇನೋ!

* * *

"ನನಗೆ ಮಲ್ಲಿಗೇ ಮೊಗ್ಗೆಂದರೆ ಪರಮ ಪ್ರೇಮ. ಎಷ್ಟು ಚೆನ್ನಾಗಿ ಕಟ್ಟಿರುವೆಯೇ?........." ಶಾರದಮ್ಮ ಕಣ್ಣರಳಿಸುತ್ತ ಹೇಳಿದಳು.

"ಅಷ್ಟೇಕೆ ಹಂಬಲಿಸುತ್ತೀ ಬಿಡು. ನಕ್ಕರೆ ಮಲ್ಲಿಗೆ ಮೊಗ್ಗು ಸುರಿ ದಂತಾಗುವ, ಸೀಬೆಹಣ್ಣಿನ ಹಾಗೆ ಸವಿಯಾಗಿ ತೊದಲ್ಮಾತಾಡುವ ಮಗನೇ ಹುಟ್ಟುತ್ತಾನೆ" ಎಂದಳು ರೇಣು. ಶಾರದಮ್ಮ ಹಿಗ್ಗಿ ಹೇಳಿದಳು— "ಏನು ಹಾಸ್ಯಮಾಡುತ್ತೀಯೆ? ರೇಣು, ನಿನ್ನ ಮಾತು ನಿಜವಾದರೆ ನಿನ್ನ ಬಾಯೊಳಗೆ ಸಕ್ಕರೆ ಹಾಕುತ್ತೇನೆ; ನೋಡು."

"ಇನ್ನು ಕೊಂಚ ಕಾಲ ಕಳೆಯುತ್ತಲೂ, ನನಗೂ ಹಾಗೇ ಮಗೂ ಹುಟ್ಟುತ್ತೆ ಅಲ್ಲವೆ? ನಾನು ಅದನ್ನೆಷ್ಟು ಪ್ರೀತಿಯಿಂದ ಸಾಕುತ್ತೇನೋ."

ಥಟ್ಟನೆ ಶಾರದಮ್ಮನ ಬಾಯಿಂದ "ಅಯ್ಯೋ ಹುಚ್ಚು ಹುಡುಗೀ, ನಿನಗೆಲ್ಲಿ ಮಕ್ಕಳಾಗುತ್ತದೆಯೇ?" ಎಂಬ ಮಾತು ಹೊರಟುಬಿಟ್ಟಿತು.

"ಯಾಕಾಗುವುದಿಲ್ಲ? ಇನ್ನು ಕೊಂಚಕಾಲ ಕಾಯಬೇಕು...... ನಾನು ನಿನ್ನಹಾಗೆ ದೊಡ್ಡವಳಾಗುತ್ತಲೂ.........ಆಮೇಲೆ ನಗುತ್ತಿ ಯೇನೋ? ನನಗೇನೋ ಪುಟ್ಟ ಗಂಡನ್ನ ಮದುವೆ ಮಾಡಿಕ್ಕೊಂಡು, ಕಾಡುಪಕ್ಕೀ ಗೂಡಿನ ಹಾಗೆ ಪುಟ್ಟ ಮನೆ ಮಾಡ್ಕೊಂಡು......ಸಂಸಾರ ಮಾಡ್ಕೊಂಡಿರ್ಬೇಕೂಂತ ಆಸೆ. ಮನೆ ತುಂಬ ಮಕ್ಕಳು ನಮ್ಮ ಮನೆಯ ಹಿತ್ತಲುತೋಟದಲ್ಲಿ ಚೆಲುವಾದ ಹಸುರು ಗಿಡಗಳು ತುಂಬ, ತುಂಬ ಇರಬೇಕು. ಮನೆ, ಮಕ್ಕಳ ನಗು-ಗದ್ದಲದಿಂದ ತುಂಬಿರಬೇಕು. ಗಿಡಗಳೆಲ್ಲ ಹೂವರಳು ಮೊಗ್ಗು, ಕಾಯಿ. ಹೀಚು, ಹಣ್ಣುಗಳಿಂದ ತುಂಬಿರಬೇಕು. ಅಲ್ಲಿಲ್ಲದ ಅರಳದ ಹೂವಿಲ್ಲ, ಅಲ್ಲಿಲ್ಲದ ಹಣ್ಣಿಲ್ಲ ಎನ್ನುವಂತಿರಬೇಕು. ಹಾಡುವ ಹಕ್ಕಿಗಳು ಹಿತ್ತಲಲ್ಲಿ ಹಿತವಾಗಿ ಹಾಡುತ್ತಿರಬೇಕು. ನನ್ನ ಸಂಸಾರ ಎಲ್ಲರೂ ಹೊಗಳುವಂತಿರಬೇಕು.........ನಾನು ಇಷ್ಟೊಂದು ಸುಖದ ರಾಣಿ.........ನಾನು ನನ್ನ ಗಂಡ, ಎರಡು ಹಕ್ಕಿಗಳ ಹಾಗೆ ಹಾಡಿಕೊಂಡು, ಕುಣಿದುಕೊಂಡು ಆಟವಾಡಿಕೊಂಡಿರಬೇಕು. ಅವನು ಯಾವತ್ತೂ ನಿರ್ಮಲೆಯ ಗಂಡನ ಹಾಗೆ ಮೋರೆ ಸಿಡಿಸಿಕೊಂಡು, ಹುಬ್ಬು ಗಂಟುಹಾಕಿಕೊಂಡಿರಬಾರದು. ನಗುನಗುತ್ತಾ ಇರಬೇಕು......... ..........."

ಶಾರದಮ್ಮನಿಗೆ ಬಹಳ ದುಃಖವಾಯಿತು. ಕಣ್ಣು ಕಣ್ಣೀರಿನ ಕೊಳವಾಯಿತು.

ಆ ಮುಗ್ಧೆ ಮಾತು ಮುಂದುವರಿಸಿದಳು—"ನೋಡು, ಶಾರದಮ್ಮ, ನನಗೇನೋ ಎಲ್ಲರನ್ನೂ ಸಂತೋಷಪಡಿಸಬೇಕೆಂದು ಬಹಳ ಆಸೆ. ನಗು ನಗುತ್ತಾ ಮಾತಾಡುತ್ತೇನೆ, ನಗುನಗುತ್ತಾ ಕೆಲ್ಸ ಮಾಡುತ್ತೇನೆ. ನಗು ನಗುತ್ತಾ ಆಟವಾಡಿಕೊಂಡಿರ್ತೇನೆ. ಆದರೂ ಎಲ್ಲರಿಗೂ ನನ್ಮಾತು ಕೇಳಿ ಅಳು ಬರುತ್ತೆ. ಅಮ್ಮ ನನ್ನ ನೋಡಿದಾಗಲೆಲ್ಲ ಅಳ್ತಾಳೆ. ನನಗೆ ಕಾಣದಂತೆ ಕಣ್ಣೀರು ಒರಸಿಕೊಳ್ಳುತ್ತಾಳೆ. ಆದರೆ ಅವಳು ಅಳೋದು ನನಗೇನು ತಿಳಿಯೊಲ್ವೇ? ನಾನೇನು ಎಳೇ ಮಗುವೇ? ಅವಳು ಅಳುವಂಥಾದ್ದು ನಾನೇನು ಮಾಡಿದೇನೆ ಹೇಳು. ಅಗೋ, ನಿನ್ನ ಕಣ್ಣಲ್ಲೂ ನೀರು ಬಂತು. ನೀನೂ ಅಳುತ್ತೀಯಾ?"

ರೇಣುಕೆಯ ನಗೆಮೊಗ ಸ್ವಲ್ಪ ಗಂಭೀರವಾಯಿತು. ಶಾರದಮ್ಮನಿಗೆ ಅವಳ ಮಾತು ಕೇಳಿ ಮತ್ತಷ್ಟು ವ್ಯಸನವುಂಟಾಯಿತು. ಆದರೂ ಬಲವಂತದ ನಗು ತಂದುಕೊಂಡು ಮಾತಾಡಿದಳು—"ಎಲ್ಲರೂ ಅಳೋ ಹಾಗೆ ನೀನೇನು ಮಾಡ್ತೀಯಮ್ಮಾ? ನನ್ನ ಮುದ್ದು ರೇಣು, ನನ್ನ ಭಂಗಾರ. ನಾನತ್ತದ್ದು ನಿನ್ಮಾತು ಕೇಳಿ ಅಂತ ತಿಳಿದುಕೊಂಡೆಯಾ? ಅಯ್ಯೋ ಪೆಚ್ಚು ಹುಡುಗಿ. ನಿನ್ನನ್ನ ನೋಡೋಕೇ ಎಷ್ಟೋ ಸಂತೋಷ ವಾಗುತ್ತೆ. ಏನು ಜಾಣತನ, ಎಷ್ಟು ಒಳ್ಳೇ ಗುಣ. ಎಲ್ಲಾ ನಿನ್ನ ಹೆತ್ತೋಳ ಪುಣ್ಯಾಮ್ಮ. ಚೊಕ್ಕ ಚಿನ್ನ ನಿನ್ನ ಅಂತಃಕರಣ." ಆದರೆ ಆಕೆಯ ಮನಸ್ಸು ಮುದುಡಿಕೊಂಡು ಕೊರಗಿತು.

"ನಿನಗೆ ಮಕ್ಕಳೂಂದ್ರೆ ಎಷ್ಟು ಪ್ರೀತಿಯೋ ರೇಣು?"

"ಮಕ್ಕಳೂಂದ್ರೆ ನನಗೆ ಪ್ರಾಣ. ವಿಮಾನಾ ಇಲ್ಲಿದ್ದಷ್ಟು ದಿನವೂ ದಿನವೂ ಅವಳ ಮಕ್ಕಳನ್ನೆತ್ತಿಕೊಂಡು ಆಡಿಸ್ತಾ ಇದ್ದೆ. ಅವಳು ಹೊರಟು ಹೋದಾಗ್ನಿಂದ ನನಗೆ ಆಡಿಸೋಕೆ ಯಾವ ಮಕ್ಕಳೂ ಇಲ್ಲ. ವಿಮಾನಾ ಮಕ್ಕಳು ಎಷ್ಟು ಚೆನ್ನಾಗಿವೇಂತ? ಮುತ್ತಿನಂಥ ಮಕ್ಕಳು. ನೋಡು, ಆದರೆ ವಿಮಾನಾ ಬಲು ಸಿಡುಕುಗಾರ್ತಿಯಮ್ಮ. ಅವಳಿಗೆ ಮಕ್ಕಳನ್ನ ನೋಡಿಕೊಳ್ಳೋಕೇ ಬರೋಲ್ಲ. ಮಗು ಅಳ್ತಾ ಇದ್ರೂ, ತನ್ನ ಪಾಡಿಗೆ ತಾನು ಮಾಡೋ ಕೆಲಸ ಮಾಡ್ತಾಲೇ ಇರ್ತಾಳೆ."

"ಒಂದೇ ಮಗು ಇದ್ದರೆ ತುಂಬಾ ಪ್ರೀತಿ ಇರುತ್ತೆ. ನೋಡಿ ಕೊಳ್ಳೋದು ಸುಲಭ. ಚೆನ್ನಾಗಿ ನೋಡಿಕೊಳ್ಳಬಹುದು. ಹಿಂದೊಂದು, ಮುಂದೊಂದು, ಕಂಕುಳಲ್ಲೊಂದು, ಕೈಯಲ್ಲೊಂದು, ಸೆರಗು ನೆರೀ ಹಿಡಿದು ಕೊಂಡು ಒಂದೊಂದು ಅಂತ ಐದೋ ಆರೋ ಮಕ್ಕಳಿದ್ರೆ ಯಾರ ಕೈಯಲ್ಲಿ ಸುಧಾರಿಸೋಕ್ಕಾಗುತ್ತೆ ಹೇಳು? ನಿನಗೂ ನಾಲ್ಕು ಮಕ್ಕಳಿದ್ದಿದ್ದರೆ ಆಗ ಆ ಕಷ್ಟ ಗೊತ್ತಾಗ್ತಿತ್ತು."

"ನಾಲ್ಕ್ಯಾಕೆ, ಹತ್ತು ಮಕ್ಕಳಾಗಲೇಳು. ಅವನ್ನ ಹೇಗೆ ನೋಡಿ ಕೊಳ್ಳುತ್ತೇನೋ!" ಶಾರದಮ್ಮ ಮರುಗಿದಳು. ರೇಣು ಹುಚ್ಚು ಹುಡುಗಿ. ಛೆ! ಆ ದೇವರಿಗೆ ಕಣ್ಣೆಂಟೆ?

* * *

ಶಾರದಮ್ಮನಿಗೆ ರೇಣುಕೆಯ ಮಾತಿನಂತೆ ಗಂಡು ಮಗು ಹುಟ್ಟಿತು. ಮಗು ತಾಯಿಯಂತೆಯೇ ನೋಡಲು ಲಕ್ಷಣವಾಗಿತ್ತು. ಆ ದಿನ ರೇಣುವಿಗೆ ಬಲು ಸಂತೋಷ. ನಾಮಕರಣದ ದಿನ ಅವಳ ಓಡಾಟವೇ ಓಡಾಟ. ಮಗು ಹುಟ್ಟಿದಂದಿನಿಂದ ರೇಣು ಶಾಸ್ತ್ರಿಗಳ ಮನೆಗೆ ಹೋಗುವುದು ಹೆಚ್ಚಿತು. ಅವಳು ಬರುವುದರಿಂದ, ಅವಳು ತಮ್ಮ ಮನೆಯಲ್ಲಿದ್ದಷ್ಟುಕಾಲವಾದರೂ ಮಗುವನ್ನು ನೋಡಿಕೊಳ್ಳುವ ಕಷ್ಟ ತಪ್ಪುತ್ತದೆಂದು ಶಾರದಮ್ಮ ಯೋಚಿಸಿದರು.

* * *

ರೇಣು ಬೆಳೆದಳು. ತಾಯಿ ಸಾವಿತ್ರಮ್ಮ ಮಗಳ ಚಿಂತೆಯಲ್ಲೇ ಕೊರಗಿ ಕೊರಗಿ ಕೃಶರಾಗಿ ಸತ್ತುಹೋದರು. ತಂದೆ, ಇಳಿ ವಯಸ್ಸಿನಲ್ಲಿ ಹೆಂಡತಿ ತೀರಿಹೋದ ದುಃಖ, ಮಗಳ ವೈಧವ್ಯ, ಖಾಯಿಲೆ ಎಲ್ಲಾ ಸೇರಿ ಅವರೂ ತೀರಿಹೋದರು. ತಂದೆ ತಾಯಿಗಳಿಬ್ಬರೂ ತೀರಿಹೋದ ಮೇಲೆ ಪರದೇಶಿ ರೇಣು ಎಲ್ಲಿರಬೇಕು? ಅವಳಿಗೆ ಅತ್ತೆ ಮಾವಂದಿರೇನೋ ಇದ್ದರು. ಯಾರೂ ತಾವಾಗಿ ಬಂದು ಕರೆದುಕೊಂಡು ಹೋಗಲಿಲ್ಲ. ಕಡೆಗೆ ಅಂತಹ ದುಃಖಕಾಲದಲ್ಲಿ ವಿಚಾರಿಸಿಕೊಂಡು ಸಹ ಹೋಗಲಿಲ್ಲ. ಗಂಡನು ಹೋದಂದೇ ಅವಳಿಗೆ ಅತ್ತೆಯ ಮನೆ ಎರವಾಗಿತ್ತು, ಇದ್ದೂ ಇಲ್ಲದಂತಾಗಿತ್ತು. ಅಂತ್ಯವಿಧಿಗಾಗಿ ರೇಣುವಿನ ಮನೆಗೆ ಹೋಗಿದ್ದವಳು, ಅವಳ ದೊಡ್ಡಮ್ಮನ ಮಗಳು ರತ್ನಮ್ಮ, ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋದಳು. ಮೊದ ಮೊದಲು, ತಾನೇಕೆ ಪರರಿಗೆ ಹೊರೆಯಾಗಿರಬೇಕೆಂದು ರೇಣು ಹೋಗಲೊಪ್ಪಲಿಲ್ಲ. ರತ್ನಮ್ಮ, "ರೇಣು, ರೇಣು, ಹತ್ತು ಜನ ಊಟಮಾಡುವ ಕಡೆ ನೀನೊಬ್ಬಳು ನಮಗೆ ಭಾರವೇ? ನಿನ್ನಂಥ ಹುಡುಗಿ ಒಂದು ಹೊರೆಯೇ? ಊಹೂಂ — ಹಿಂದೆಲ್ಲಾ ಸಾವಿತ್ರಮ್ಮ, ರಂಗಪ್ಪ ಅವರು ನಮಗೆ ಎಷ್ಟು ಮಾಡಿಲ್ಲ? ಈಗ ನಿನಗೆ ಒಂದು ತುತ್ತು ಅನ್ನ ಹಾಕಲಾರೆವೇ?" ಎಂದು ಏನೇನೋ ಹೇಳಿ ರೇಣುಕೆಯನ್ನು ಒಡಂಬಡಿಸಿ ತನ್ನ ಮನೆಗೆ ಕರೆದುಕೊಂಡುಹೋದಳು.

ಅವಳಿಗೀಗ ಎಲ್ಲಾ ತಿಳಿಯುತ್ತದೆ. ಬೆಳೆದು ದೊಡ್ಡವಳಾಗಿದ್ದಾಳೆ. ತುಂಬಿದ ಸಂಸಾರದಲ್ಲಿ ಎಲ್ಲರ ಸುಖವನ್ನು ಕಣ್ಣಿನಿಂದ ನೋಡುತ್ತಾ,

ತಾನೊಬ್ಬಳು ಮಾತ್ರ ಎಲ್ಲರೂ ಪಡುತ್ತಿರುವ ಸಂಸಾರ ಸುಖದಿಂದ, ಮಕ್ಕಳು ಮರಿಗಳ ಮಮತೆಯ ಸುಖದಿಂದ ವಂಚಿತಳಾಗಿರಬೇಕಾಗಿದೆ. ಒಮ್ಮೊಮ್ಮೆ ಅವಳ ಅಳಲನ್ನು ನೆನೆದು ರತ್ನಮ್ಮನ ಎದೆ ವ್ಯಥೆಯಿಂದ ತುಂಬಿಹೋಗುತ್ತದೆ. ಆದರೆ ಏನುಮಾಡಿ ತಾನೇ ಅವಳ ಬಾಳಿನ ಅರಕೆಯನ್ನು ತುಂಬಿಕೊಡುವುದು ಸಾಧ್ಯ? ಒಮ್ಮೊಮ್ಮೆ ರತ್ನಮ್ಮ, "ಅಯ್ಯೋ! ಈ ಹಾಳು ಬ್ರಾಹ್ಮಣ ಜಾತಿಯಲ್ಲಿ ರೇಣು ಯಾಕೆ ಹುಟ್ಟಿದಳೋ? ಮತ್ತಾವ ಜಾತಿಯಲ್ಲಾದರೂ ಹುಟ್ಟಿದ್ದರೆ?......ಪುನಃ ಮದುವೆಯಾದರೂ ಆಗಬಹುದಿತ್ತೇನೋ?......ಇಷ್ಟೊಂದು ಸೌಂದರ್ಯ, ಅವಳ ಗುಣ, ಬುದ್ಧಿ ಎಲ್ಲ ವ್ಯರ್ಥ. ಕಾಡಿನ ಬೆಳದಿಂಗಳು. ಅವಳ ಆ ಯಾತನೆಯನ್ನು ಕಂಡು ಕಂಗಳೇಕೆ ಸಿಡಿಯುವುದಿಲ್ಲವೋ? ಎದೆಯೇಕೆ ಒಡೆಯದೋ!" ಎಂದು ಏನೇನೋ ಯೋಚಿಸುತ್ತಾಳೆ.

ಅವಳ ಬಾಳಿನ ಬೆಳಕು ನಂದಿಹೋಗಿದೆ. ಆದರೂ ರತ್ನಮ್ಮನ ಮನೆಗವಳು ಬೇಕಾಗಿದ್ದಾಳೆ. ಅವಳ ಹಂಬಲು ಮೊಗ್ಗಿನಲ್ಲೇ ಬಾಡಿಹೋಗಿದೆ. ಆದರೂ ದಿನದಿನವೂ ಎಲ್ಲರ ಮನದ ಮುಗುಳುಗಳನ್ನವಳು ಅರಳಿಸುತ್ತಿದ್ದಾಳೆ. ಮನೆಯ ಅರ್ಧ ಮುಕ್ಕಾಲು ಕೆಲಸವನ್ನೆಲ್ಲಾ ಅವಳು ಒಬ್ಬಳೇ ಲೀಲಾಜಾಲವಾಗಿ ಮಾಡಿಕೊಂಡು ಹೋಗುತ್ತಾಳೆ. ಅವಳಿಗೆ ಕೊಂಚವಾದರೂ ಅಲಸಿಕೆ ಬೇಸರಿಕೆಗಳೆಂಬುದಿಲ್ಲ. ರತ್ನಮ್ಮನ ಮತ್ತು ಅವಳ ಓರಗಿತ್ತಿಯ ಮಕ್ಕಳನ್ನವಳು ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಾಳೆ. ಅವಳಿಂದಲೇ ಮನೆ ನಂದಗೋಕುಲವಾಗಿದೆ. ಎಲ್ಲರ ಸುಖವನ್ನು ನೋಡುತ್ತಾ, ಇನ್ನೊಬ್ಬರ ಮಕ್ಕಳು ಮರಿಗಳನ್ನು ಎತ್ತಿ ಆಡಿಸುತ್ತಾ, ತನ್ನ ಹಂಬಲನ್ನು ತೀರಿಸಿಕೊಳ್ಳುತ್ತಿದ್ದಾಳೆ.

# ಹೊರನಾಡಿನಲ್ಲಿ ಎರಡು ಸಂಜೆ

ಕಿಟಕಿಯ ಬಳಿ ನಿಂತುಕೊಂಡೇ ನಿರುಪಮೆ ಯೋಚನೆಯ ಸೆಳವಿಗೆ ಸಿಕ್ಕಿ ಎತ್ತೆತ್ತಲೋ ತೇಲಿಹೋಗುತ್ತಿದ್ದಳು. ಸ್ಫಟಿಕದಂತೆ ಸ್ವಚ್ಛವಾಗಿ ಥಳಿಥಳಿಸುತ್ತಿದ್ದ ತಿಳಿ—ನೀಲಿಯಾಗಸವನ್ನು ಕತ್ತಲೆ ಕವುರಿಹೋಗಿತ್ತು. ಅಲ್ಲೊಂದು ಇಲ್ಲೊಂದು ಬಾನ ಹೂ ಅರಳಿ ಸಣ್ಣ ನಗು ಬೀರುತ್ತಿತ್ತು. ಗಡಿಯಾರದಲ್ಲಿ ಎಂಟು ಗಂಟೆ ಬಡಿದುಹೋಗಿತ್ತು. ಅವಳಿಗೆ ಅದಾವುದರ ಪರಿವೆಯೂ ಇರಲಿಲ್ಲ. ಅವಳು ಅಲ್ಲಿ ನಿಂತು ಎರಡು ಗಂಟೆಯಾದರೂ ಆಗಿದ್ದಿರಬೇಕು.

ವರಾಂಡಾದಲ್ಲಿ ಹೆಜ್ಜೆಯ ಸಪ್ಪಳವಾಯಿತು. ಬೀದಿಯಲ್ಲಿ ನೂರು ಜನ ಹೋದರೂ ಅದನವಳ ಕಣ್ಣಿಗೆ ಕಂಡಿರಲಿಲ್ಲ. ಕಿವಿ ಗಡಚಿಕ್ಕುವಂತೆ ಗಡಿಯಾರ ದಲ್ಲಿ ಗಂಟೆ ಹೊಡೆದುಹೋಗಿದ್ದರೂ ಅವಳ ಸಮಾಧಿ ಭಂಗವಾಗಿರಲಿಲ್ಲ. ಅವಳ ಏಕಾಗ್ರತೆಗೆ ಎಳ್ಳನಿತೂ ಕುಂದು ತಂದಿರಲಿಲ್ಲ. ಆದರೂ ಮೃದು ವಾದ ಪಾದಶಬ್ದ ಅವಳನ್ನು ಜಾಗ್ರತಪ್ರಪಂಚಕ್ಕೆ ತಂದುಬಿಟ್ಟಿತು. ಆ ಮುಸುಕು ಬೆಳಕಿನಲ್ಲೂ ಜಯಂತನ ಮುಖ ಸ್ಫುಟವಾಗಿ ಕಾಣಿಸಿತು. ಜಯಂತನು ಒಡನೆಯೇ ಒಳಗೆ ಪ್ರವೇಶಿಸಿ, "ನಿರುಪಮಾ, ಕತ್ತಲಲ್ಲೇಕೆ ನಿಂತಿದ್ದೀ? ದೀಪ ಹೋಗಿಬಿಟ್ಟಿದೆಯೇನು?" ಎಂದು ಕೇಳಿದನು.

"ಇಲ್ಲ; ಏನೋ ಸುಮ್ಮನೇ ಹಾಗೇ ನಿಂತುಕೊಂಡೆ" ಎಂದು ಗೋಡೆಯ ಮೇಲೆ ಕೈಯಾಡಿಸಿ ದೀಪದ ಸ್ವಿಚ್ಚನ್ನೊತ್ತಿದಳು. ವಿದ್ಯು ದ್ದೀಪದ ಬೆಳಕಿನಲ್ಲಿ ಅವಳ ಕಂದಿದ ಮುಖವನ್ನು ಕಂಡು, "ಯಾಕೆ? ಮೈಯಲ್ಲಿ ಹುಷಾರಿಲ್ಲವೇ? ಮುಖ ಯಾಕೆ ಇಷ್ಟು ಸಪ್ಪಗಿದೆ?" ಎಂದು ಜಯಂತ ಮತ್ತೆ ಕೇಳಿದನು.

ಮೊಗದಲ್ಲಿ ಗೆಲವು ತೋರಲು ಸಣ್ಣ ನಗುವೊಂದನ್ನು ನಕ್ಕು ಹೇಳಿದಳು ನಿರುಪಮಾ:

"ಸ್ವಸ್ಥವಿಲ್ಲದೇ ಏನು? ಮನೇಲಿ ಒಬ್ಬಳೇ ಇದ್ದೆ. ಮಾತಾಡೋಕೆ ಜೊತೆಗೆ ಯಾರೂ ಇಲ್ಲ. ಈ ಕಡೆ ಪಕ್ಕದ ಮನೆಯವರೆಲ್ಲಾ ಮುಸಲ್ಮಾನರು.

ಆ ಹೆಂಗಸರೋ ಈಚೆಗೇ ತಲೆ ಹಾಕೊಲ್ಲ. ಆ ಕಡೆ ಪಕ್ಕದವರು ತೆಲುಗರು. ಎದುರುಗಡೆ ಬಂಗಾಳಿ, ಕ್ರಿಶ್ಚಿಯನ್, ತಮಿಳರು. ನಾನು ಯಾರ ಕೈಲಿ ಮಾತಾಡಬೇಕು ?''

"ಅದಕ್ಕಿಷ್ಟು ಬೇಜಾರೇ? ಹಾಗೇ ಮೆಲ್ಲ ಮೆಲ್ಲನೆ ಅವರುಗಳ ಕೈಲೇ ಒಳ್ಳೆ ಮಾತಾಡಿಕೊಂಡು, ಪರಿಚಯ ಬೆಳಸಿಕೊಂಡು, ಅವರನ್ನೇ ನಮ್ಮೋರು ತಮ್ಮೋರಂತ ತಿಳಿದುಕೋಬೇಕು. ಅವರುಗಳನ್ನೇ ನಮ್ಮೋರು ತಮ್ಮವ ರನ್ನಾಗಿ ಮಾಡಿಕೋಬೇಕು.''

"ಇಲ್ಲೋ ಕನ್ನಡದ ಒಂದು ಪಿಳ್ಳೆಯೂ ಇಲ್ಲ. ಕನ್ನಡದ ಸೊಲ್ಲು ಕೇಳಿಯೇನೇ ಎನ್ನುವಂತಾಗಿದೆ. ನೀವೋ ಬೆಳಗ್ಗೆ ಎದ್ದರೆ ನಿಮ್ಮ ಆಫೀಸು. ಸಂಜೆಯಾದರೆ ನಿಮ್ಮ ಸ್ನೇಹಿತರು, ವಾಕಿಂಗ್······ನಾನೊಬ್ಬಳು ಇಲ್ಲಿ ಒಂಟಿಬಡಕ ಸುಂಟರಗಾಳಿಯಾಗಿ ಬಿದ್ದಿರಬೇಕು.''

"ಅದಕ್ಕೆ ನನ್ನೇನು ಮಾಡೂಂತೀಯಾ ? ಮೂರು ಹೊತ್ತೂ ಮನೇಲಿ ಕೂತಿದ್ದರೆ ತಿಂಗಳಾಗುತ್ತಲೂ ಸಂಬಳ ಕೊಡೋರು ಯಾರು? ಮೇಲಿನ ಆಫೀಸರ್ ಏನು ನಮ್ಮ ಚಿಕ್ಕಪ್ಪನೋ? ದೊಡ್ಡಪ್ಪನೋ?—ಅಲ್ಲಾ, ಬಂದು ಎಂಟು ದಿನವಾಗಲಿಲ್ಲ, ಆಗಲೇ ಇಷ್ಟು ಬೇಸರವೇ?''

"ಓಹೋ ಮರೆತಿದ್ದೆ, ಅನ್ನಕ್ಕೆ ಇಟ್ಟು ಬಂದಿದ್ದೆ. ಏನಾಗಿದೆಯೋ ನೋಡುತ್ತೇನೆ.''

ಅನ್ನವೆಲ್ಲಾ ಸೀದು ಕರಿಯಾಗಿಹೋಗಿತ್ತು. ಪುನಃ ಕೋಣೆಗೆ ಬಂದು ಹೇಳಿದಳು—"ಅನ್ನ ಸೀದು ಸಾದೇ ಆಗಿಹೋಗಿದೆ. ಮತ್ತೆ ಅರೆಪಾವು ಅಕ್ಕಿ ತೊಳೆದಿಟ್ಟು ಬರುತ್ತೇನೆ.''

ಅನ್ನವಾಗುವವರೆಗೂ ಅದೂ ಇದೂ ಮಾತಾಡುತ್ತಿದ್ದು ಅನ್ನ ವಾಗುತ್ತಲೇ ಇಬ್ಬರೂ ಜೊತೆಯಲ್ಲಿ ಊಟಕ್ಕೆ ಕುಳಿತರು. ಜಯಂತ ಅನ್ನ ಕಲಸುತ್ತ ಹೇಳಿದನು—"ಈಚೆಗೆ ಬಲು ಮಾತಿನ ಮಲ್ಲಿ ಆಗಿಹೋಗಿದ್ದೀ. ನಿನಗೆ ಯಾರು ಇಷ್ಟು ಮಾತು ಕಲಿಸಿದವರು? ಬೆಳಗ್ಗೆ ಆರು ಗಂಟೆಯಿಂದ ರಾತ್ರಿ ಹತ್ತು ಗಂಟೆಯುವರೆಗೂ ಬಾಯಿಗೆ ಬಿಡುವೇ ಇಲ್ಲ—ಅದೇನು ಬಾಯಿಂತ ಬ್ರಹ್ಮ ಮಾಡಿದನೋ!''

"ಹೂಂ ನಾನು ಊರಿನಲ್ಲಿ ಇದ್ದಾಗಲಾದರೆ ಮನೇ ತುಂಬ ಜನ

ವಿದ್ದರು. ಆಚೇ ಮನೆ ಅಲಮೇಲಮ್ಮನವರು, ಈಚೇ ಮನೆ ತಾಯಮ್ಮ, ದೇವಮ್ಮನವರು — ಎಲ್ಲಾ ಬರುತ್ತಾ ಹೋಗುತ್ತಾ ಇದ್ದರು. ಅವರು ಗಳೊಡನೆ ಮಾತಾಡುತ್ತಾ ಹೊತ್ತು ಹೋಗುತ್ತಾ ಇತ್ತು. ಈಗ ಏನಿದ್ದರೂ ನಿಮ್ಮ ಕೈಲೇ ಮಾತಾಡಬೇಕು. ಅದಕ್ಕೇ ನಿಮಗೆ ಹರಟೇಮಲ್ಲಿಯಾಗಿ ಕಾಣಸ್ತೀನಿ."

"ಲಾಹೋರಿಗೆ ಬರ್ತೀನೀಂತ ಕುಣಿಯೋವಾಗ ಹೇಗಿತ್ತು? ಈಗ ಎಂಟು ದಿನಕ್ಕೆ ಉತ್ಸಾಹವೆಲ್ಲಾ ತಣ್ಣಗಾಗಿಹೋಯಿತೋ?"

ಅಷ್ಟರಲ್ಲಿ ವ್ರಜಧರ ಅತ್ತ ಶಬ್ದವಾಯಿತು.

"ಮಗು ಅಳುತ್ತಿದೆ, ನೋಡು ಹೋಗು."

ನಿರುಪಮಾ ಅರ್ಧ ಊಟದಲ್ಲೆದ್ದು, ಕೈತೊಳೆದುಕೊಂಡು, ನಡು ಮನೆಯಲ್ಲಿದ್ದ ತೊಟ್ಟಿಲ ಬಳಿ ಹೋದಳು. ಮಗುವನ್ನು ತೂಗಿ ಮಲಗಿಸಿ ಮತ್ತೆ ಬಂದು, "ಅಬ್ಬಬ್ಬಾ! ಏನು ಸೆಖೆ! ಪ್ರಾಣ ಹಿಂಡುತ್ತೆ. ಸೆಖೆಗೆ ಅರ್ಧ ಕುಮಾರನ ರಗಳೆ.

"ಮತ್ತೆ ಮಲಗಿತೇನು?"

"ಹೂಂ.........."

"ಸಂಜೆ ಹಾಲು ಹಾಕಿದೆಯಾ?"

"ಆರು ಗಂಟೇಲಿ ಹಾಲು ಕುಡಿಸಿ ಮಲಗಿಸಿದ್ದೆ. ಈಗಲೇ ಎದ್ದಿದ್ದು, ನಿಮ್ಮ ಕುಮಾರ."

"ಈಗ ಹಾಲು ಕುಡಿಸೋಲ್ವೇ?"

"ಇಲ್ಲ, ಇನ್ನೂ ಸ್ವಲ್ಪ ಹೊತ್ತು ಹೋಗಲಿ."

"ಮರೆತಿದ್ದೆ ನೋಡು, ಇದ್ದಾನಲ್ಲಾ ಮಗರಾಯ. ಅವನ ಕೈಲಿ ಮಾತಾಡುತ್ತಾ ಹೊತ್ತು ಕಳೆ............ನಾನೊಬ್ಬನೇ ಎಷ್ಟೊಂತ ನಿನ್ಮಾತು ಕೇಳ್ಲಿ. ನನ್ಕಿವೀ ಎಲ್ಲಿ ತೂತು ಬಿದ್ದುಹೋಗುತ್ತೋಂತ ಹೆದರಿಕೆ."

"ಸಾಕು ಸುಮ್ನಿರೀಂದ್ರೆ. ಇನ್ಮೇಲೆ ಬಾಯಿಗೆ ಬೀಗಾ ಹಾಕಿಕೊಂಡಿರ್ತೀನಿ. ನಿಮ್ಮನ್ನ ಮಾತಾಡ್ಸಿದ್ರೆ ಕೇಳಿ."

"ನೀವೇನು 'ಮಾಣಿಕದಂಥ ಮಗ ಮುಂದ ಮಲಗಿದರ, ಮಾರಾಯ್ರ ಗೊಡವೆ ನನಗೇನ—' ಅನ್ನುವ ಗರತೀರು."

"ಅಲ್ಲಲ್ಲಾ, 'ವಾರೀಗಿ ರಾಯ ಒಳಹೊರಗ ಸುಳಿದರ ವಾಲೀಗಿ ವಜ್ರ ಜಡಿದ್ಹಂಗ' ಅನ್ನುವಂಥವರು."

"ಅಯ್ಯೋ ಪಾಪ!"

"ನೀವಾದರೆ 'ಕಮಲದ ಹೂ ನಿನ್ನ ಕಾಣದೆ ಇರಲಾರೆ, ಮಲ್ಲೀಗಿ ಮಾಯೆ ಬಿಡಲಾರೆ, ಕೇದಗೇ ಗರಿ ನಿನ್ನಗಲಿ ಇರಲಾರೆ' ಅನ್ನೋ ಅಂಥಾ ಕೃಷ್ಣಭಕ್ತರು. ಹೃದಯವನ್ನಾಳುವವಳೊಬ್ಬಳು, ಮನವಾರ್ತೆ ನೋಡಿ ಕೊಳ್ಳೋಳೊಬ್ಬಳು, ಇಷ್ಟರ ಮೇಲೆ ಮನೆಯ ಹೊರಗೆ ನಿಮ್ಮ ವಿಲಾಸ ಕ್ಕೊಬ್ಬಳು—ಗಂಡಸರದೆಲ್ಲಾ ಇಷ್ಟೇ. ಒಳಗೊಂದು, ಹೊರಗೊಂದು" ಎಂದು ಅವನ ಅಣಕದ ನುಡಿಗೆ ಪ್ರತ್ಯುತ್ತರವಿತ್ತು ಅವನ ಸಾಲವನ್ನು ಬಡ್ಡಿ, ಚಕ್ರಬಡ್ಡಿ ಸಮೇತವಾಗಿ ತೀರಿಸಿದಳು.

"ನಿನಗಿಷ್ಟು ಹೆದರಿ ನಡೆದುಕೊಳ್ತಾ ಇದ್ದೇ ನೀನಿಷ್ಟು ತರಾಟೆಗೆ ತಗೋಳ್ತಾ ಇದ್ದೀಯಾ. ಇನ್ನು ಹಾಗೇನಾದರೂ ಇದ್ದಿದ್ದರೆ?...... ಕುಕ್ಕೇಲಿ ನನ್ನ ಕುಕ್ಕರಿಸಿ ಪೇಟೆಗೆ ಹೊತ್ಕೊಂಡ್ಹೋಗಿ ನನ್ನ ಮಾರ್ಕೊಂಡು, ಕೇರ್ಕೊಂಡು........"

"ಅಬ್ಬಬ್ಬಾ ನಿಮಗೆ ಅಂಥಾ ಜುಟ್ಟು ಹಿಡಿದು ಜುಂಗಿಸಿ ಏಳು ಕೆರೇ ನೀರು ಕುಡಿಸೋ ಗಂಡುಬೀರೀನೇ ಸಿಕ್ಕಬೇಕಾಗಿತ್ತು. ತಪ್ಪಿ ನಾನು ಸಿಕ್ಕಿಬಿದ್ದೆ."

"ಸರಿ, ನಿನ್ನ ಕೈಲಿ ವಾದಿಸಿ ಯಾರು ಬದುಕಿಯಾರು?" ಎನ್ನುತ್ತ ಜಯಂತ ಊಟವನ್ನು ಮುಗಿಸಿ ಎದ್ದನು.

* * *

ಆರು ತಿಂಗಳು ಉರುಳಿಹೋಗಿದ್ದುವು. ಡಿಸೆಂಬರ್ ತಿಂಗಳ ಕೊನೆ. ನಿರುಪಮೆಯು ರಾತ್ರಿಯ ಅಡಿಗೆ ಇನ್ನೂ ಪೂರೈಸಲಿಲ್ಲ. ಯಾವುದೋ ಕನ್ನಡ ಪದವನ್ನು ಮೆಲುದನಿಯಲ್ಲಿ ಕುರುಕುತ್ತಾ, ಒಲೆಯ ಮುಂದೆ ಬೆಚ್ಚಗೆ ಕುಳಿತು ಬೆಂಕಿ ಕಾಯಿಸಿಕೊಳ್ಳುತ್ತಿದ್ದಳು. ಅಂದು ವಿಪರೀತ ಚಳಿ. ಬರಿಗಾಲಿನಲ್ಲಿ ನೆಲದ ಮೇಲೆ ಕಾಲಿಡಲಾಗುತ್ತಿರಲಿಲ್ಲ, ತಣ್ಣಗೆ ಕೊರೆಯು ತ್ತಿತ್ತು. ಪಾತ್ರೆಗಳಲ್ಲಿ ಬೆಳಗ್ಗೆ ತುಂಬಿಟ್ಟಿದ್ದ ನೀರು ಮಂಜುಗಡ್ಡೆಯಂತಾಗಿ

ಹೋಗಿತ್ತು. ಹೊರಗೆ ಕೊರೆಯುವ ಕುಳಿರ್ಗಾಳಿ ಸುಯ್ಯೆಂದು ಬೀಸುತ್ತಿತ್ತು. ಆರು ಗಂಟೆ ಇನ್ನೂ ಆಗಿಲ್ಲದಿದ್ದರೂ ಕತ್ತಲು ಕವಿದುಹೋಗಿತ್ತು. ನಿರುಪಮೆ ಹಾಡು ನಿಲ್ಲಿಸಿ, 'ಇವರು ಹೊರಗೆಲ್ಲಾದರೂ ಹೋದರೆ ಮನೆಯ ಕಡೆ ಜ್ಞಾನವೇ ತಪ್ಪಿಹೋಗುತ್ತೆ' ಎಂದು ಗೊಣಗಿಕೊಂಡಳು. ಅಷ್ಟುಹೊತ್ತಿಗೆ ಸರಿಯಾಗಿ ಜಯಂತ, "ಅಡಿಗೆ ಇನ್ನೂ ಪೂರೈಸಿಲ್ವೆ?" ಎನ್ನುತ್ತಾ ಒಳಗೆ ಬಂದನು.

"ಇವತ್ತು ನೆನೆದ ಹೊತ್ತಿಗೆ ಸರಿಯಾಗಿ ಬಂದಿರಿ. ನಿಮಗೆ ನೂರು ವರ್ಷ ಆಯುಸ್ಸು."

"ಅಬ್ಬಾ! ಏನು ಚಳಿ" ಎನ್ನುತ್ತಾ ಬಂಬದ ಮುಂದೆ ಕುಳಿತುಕೊಂಡನು. ಹಾಗೆಯೇ ಮೈ ಕೈ ಕಾಯಿಸಿಕೊಳ್ಳುತ್ತಾ ಮಾತನಾಡತೊಡಗಿದನು. ಬಂಬ (Boiler) ಒಂದು ಬಗೆಯ ಒಲೆ. ಅದು ಚಳಿಗಾಲದಲ್ಲಿ ಇಲ್ಲದಿದ್ದರೆ ಬಹಳ ಕಷ್ಟ. ಅದನ್ನು ನೀರು ಕಾಯಿಸುವುದಕ್ಕೆ ಉಪಯೋಗಿಸುತ್ತಾರೆ. ಸಾಧಾರಣವಾಗಿ ಉತ್ತರ ದೇಶದ ಎಲ್ಲ ಮಧ್ಯಮ ದರ್ಜೆಯವರ ಮನೆಗಳಲ್ಲೂ ಬೇಸಿಗೇ ಕಾಲದಲ್ಲಿ ವಿದ್ಯುದ್ವ್ಯಜನ (Electric Fan) ಮತ್ತು ಚಳಿಗಾಲದಲ್ಲಿ ಬಂಬ (Boiler) ಗಳನ್ನು ಕೊಂಡೇ ಇರುತ್ತಾರೆ. ಅವು ಇಲ್ಲದಿದ್ದರೆ ಬಹಳ ಕಷ್ಟ. ಶ್ರೀಮಂತರ ಮನೆಯ ಉಪಕರಣಗಳನ್ನಂತೂ ಹೇಳಬೇಕಾಗಿಯೇ ಇಲ್ಲ.

"ಕುಮಾರ್ ಎಲ್ಲಿ?"

"ಈಗ ಸ್ವಲ್ಪ ಹೊತ್ತಿನಲ್ಲಿ ಎದುರುಮನೇ ಎಮಿಲಿ ಬಂದಿದ್ದಳು. ಇಲ್ಲೇ ಇಷ್ಟು ಹೊತ್ತೂ ಮಾತಾಡ್ತಾ ಕುಮಾರನನ್ನು ಆಡಿಸುತ್ತಾ ಕೂತಿದಳು. ಹೋಗುತ್ತಾ ಅವನನ್ನ ಎತ್ತಿಕೊಂಡು ಹೋದಳು."

"ಕುಮಾರ್ ಒಂದು ಗಳಿಗೆ ಮನೆಯಲ್ಲಿ ಇಲ್ಲದಿದ್ದರೆ ಮನೆ ಮನೆಯೇ ಆಗಿರೋಲ್ಲ. ಏನೋ ಬಿಕೋ ಎನ್ನುತ್ತೆ."

"ಎಮಿಲಿಗೆ ಮಕ್ಕಳಿಲ್ಲ, ಪಾಪ! ಅವಳಿಗೆ ಮಕ್ಕಳನ್ನು ಕಂಡರೆ ಆಸೆ. ನಮ್ಮ ಕುಮಾರನನ್ನು ಕಂಡರಂತೂ ಬಲು ಪ್ರೀತಿ. ಈ ನಡುವೆ ಅವನನ್ನ ಆಗಾಗ ಮನೆಗೆ ಕರೆದುಕೊಂಡು ಹೋಗ್ತಾ ಇರ್ತಾಳೆ. ನನಗೂ ನೋಡ್ಕೊಳ್ಳೋ ಕಷ್ಟ ತಪ್ಪುತ್ತೆ. ಅವಳೂ ಅವನ್ನ ಕಂಡರೆ ಬಲು

ಒದ್ದುಕೋತಾಳಲ್ಲಾ ಅಂತ ನಾನೂ ಕಳಿಸುತಾ ಇರ್‍ತೀನಿ. ಇನ್ನೇನು ಕರೆದುಕೊಂಡು ಬರಬಹುದು......"

"................."

"ಅಲ್ಲಾ, ಇವತ್ತು ಯಾಕೆ ಇಷ್ಟು ಹೊತ್ತು?"

"ಪಾಟೀಸವಾಲು ಷುರುವಾಯಿತೋ? ನಮ್ಮ ಮುಖರ್ಜಿ ಬಲವಂತ ವಾಗಿ ಕರೆದ. ಪೇಟೆಯವರೆಗೂ ಹೋಗಿ ಸುತ್ತಾಡಿಕೊಂಡು ಬಂದೆವು. ಹೇಗೂ ಕಾಫೀಪುಡಿ, ಬೆಣ್ಣೆ ತರಬೇಕಾಗಿತ್ತು, ತಂದೆ."

"ಸರಿ. ಇವತ್ತು ಮುಖರ್ಜಿ, ನಾಳೆ ಬ್ಯಾನರ್ಜಿ. ನನ್ನ ಅರ್ಜಿ ಕೇಳೋರೇ ಇಲ್ಲ. ಬರೀ ಅರಣ್ಯರೋದನವಾಗುತ್ತೆ ಅಷ್ಟೆ."

"ನಾನೂ, ಮನೇಲಿ ನೀನು ಒಬ್ಬಳೇ ಇರ್‍ತಿಯಲ್ಲಾಂತ ಆದಷ್ಟು ಬೇಗ ಬೇಗ ನಡೆದುಕೊಂಡು ಬಂದೆ."

ಸ್ವಲ್ಪ ಹೊತ್ತು ಅವಳೊಡನೆ ಮಾತಾಡುತ್ತಿದ್ದು ಜಯಂತನು ಎದ್ದು ತನ್ನ ರೂಮಿಗೆ ಹೋಗಿ ಏನನ್ನೊ ಓದುತ್ತಾ ಕುಳಿತನು. ನಿರುಪಮ ಸ್ವಲ್ಪ ಹೊತ್ತು ನೋಡಿ ಅವನು ಮರಳಿ ಬಾರದುದನ್ನು ಕಂಡು, "ಏನು ಮಾಡ್ತಾ ಇದೀರೀ?" ಎಂದು ಎರಡು ಮೂರು ಸಾರಿ ಕೂಗಿಕೊಂಡಳು. ಸಾಹಿತ್ಯ ಸಾಮ್ರಾಜ್ಯದಲ್ಲಿ ಮೈಮರೆತು ವಿಹರಿಸುತ್ತಿದ್ದ ಅವನಿಗೆ ಅವಳು ಕೂಗಿದುದು ಕೇಳಿಸಲಿಲ್ಲ.

"ಸರಿ, ಇವರೇನು ಮಾಡ್ತಾ ಕೂತರೋ ಕಾಣೆನಲ್ಲಾ. ಇವರಾಯಿತು. ಇವರ ಪುಸ್ತಕವಾಯಿತು. ಸಾಹಿತಿಗಳನ್ನು ಕಟ್ಟಿಕೊಂಡೋರ ಹಣೇಬರಹವೇ ಇಷ್ಟು, ತಲೇ ಮೇಲೆ ತಲೆ ಬಿದ್ದು ಹೋದರೂ......" ಅವಳ ಅಬ್ಬರ ಅವನನ್ನು ಪುಸ್ತಕಪ್ರಪಂಚದಿಂದ ಕೆಳಗಿಳಿಸಿತು.

"ಏನೂ? ಯಾಕೆ ಕೂಗಿದ್ದೂ?"

"ಏನ್ಮಾಡ್ತಾ ಇದೀರೀಂದ್ರೆ?"

"ಓದುತಾ ಇದ್ದೇನೆ."

"ಇಲ್ಲೇ ಬಂದು ಕೂತುಕೋಬಾರದೇ?"

ಜಯಂತ ಪುಸ್ತಕವನ್ನು ಹಿಡಿದುಕೊಂಡು ಪಾಕಶಾಲೆಗೆ ಬಂದು, "ಇಲ್ಲಿ ಕೂತರೆ ನನ್ನ ಓದು ಸಾಗುತ್ತೇ? ನೀನು ನನ್ನ ಓದಗೊಡಿಸು ತ್ತೀಯಾ?"

" ಇಲ್ಲ, ತಪ್ಪಾಯ್ತು, ಹೋಗೀಂದ್ರೆ. ಓದ್ಕೊಳ್ಳಿ ಹೋಗಿ."

" ನಿನಗೆ ಅದೆಷ್ಟು ಬೇಗ ಕೋಪ ಬರುತ್ತೆ? ಮೂಗಿನ ತುದೀಲೆ ಮುನಿಸು ಕೂತಿರುತ್ತೆ..........ಸಾನೇನ್ಮಾಡ್ಲಿ? ಹೇಳು. ಅನ್ನಾ ಬಸಿಯಲೋ?........"

" ಸದ್ಯ ಏನೂ ಮಾಡ್ಬೇಡಿ. ನನ್ನ ಕಣ್ಣೆದುರಿಗಿದ್ದರೆ ಸಾಕು."

" ನಿರೂ, ಯಾಕೆ ಇಷ್ಟು ಪರದಾಡ್ತೀ? ನನ್ನ ಒಂದು ಗಳಿಗೇ ಕಾಣದಿದ್ದರೂ ಹುಚ್ಚಿ ಹಾಗಾಡ್ತೀ."

" ನೀವಿಲ್ಲದಿದ್ದರೆ ನನಗೇನೋ ದಿಗಿಲು. ಏನೋ ಕಳವಳ. ನೀವು ಎದುರಿಗಿದ್ರೆ ನನ್ನ ಕೆಲ್ಸಾನೂ ಬೇಗ ಆಗುತ್ತೆ. ಶ್ರಮಾನೂ ತೋರೋಲ್ಲ. ನನಗೋ ಹುಟ್ಟಿದೂರು ಬಿಟ್ಟು ಬಂದಿರೋದು ಕಣ್ಣು ಕಾಣದ ಕಾಡಿಗೆ ಬಂದ ಹಾಗಿದೆ. ತಾಯ್ನಾಡು, ತಾಯ್ನುಡಿಗಳನ್ನು ತೊರೆದು, ಕರುಳಿನ ಜನರನ್ನು ತೊರೆದು, ಹೊಟ್ಟೆಯಪಾಡಿಗೆ, ಹಣದಾಸೆಗೆ ಈ ದೂರದೇಶಕ್ಕೆ ಬಂದಿದ್ದೇವೆ."

ಅವಳ ನಿಟ್ಟುಸಿರ ಬಿಸಿ ಅವನನ್ನೂ ತಾಕಿತು.

" ಹೀಗೆ ನೀನು ಹಗಲಿರುಳೂ ಹಂಬಲಿಸುತ್ತಾ ಇದ್ದರೆ ಹೇಗೆ ನಿರೂ ................"

" ಇಲ್ಲಿಯ ಜನಾನೂ ಒಳ್ಳೆಯೋರೇ. ನಮ್ಮ ಬಾಯಿ ಒಳ್ಳೆಯ ದಾದರೆ ಊರು ಒಳ್ಳೆಯದೇ. ಕಂಡು ಕೇಳರಿಯದಿದ್ದ ಹೊರಗಿನವರಾದರೂ ನಮ್ಮವರಹಾಗೆಯೇ ಅಂತಃಕರಣ ತೋರಬಲ್ಲರು, ಕರುಳು ಸೆಳೆಯುಬಲ್ಲರು ಎನ್ನುವುದು ನನ್ನೆದೆಗೂ ಹೊಳೆಯದೇ ಹೋಗಿಲ್ಲ. ಆ ಎಮಿಲಿ, ಜಮುನಾ, ಅಯೆಷಾ, ನೂರುನ್ನೀಸಾ, ಅವರೆಲ್ಲಾ ಯಾವ ಜನ್ಮದ ಬಂಧುಗಳೋ. ಆಗ ನಮ್ಮ ಖಾಯಿಲೇಲಿ ನಿಮ್ಮ ಸ್ನೇಹಿತರ ತಾಯಿ ನಮಗೆ ಮಾಡಿದ ಸೇವೆಯನ್ನು ಎಂದಿಗೆ ತಾನೇ ಮರೆತೇವು? ಆ ಋಣ ಎಂದಿಗೆ ತಾನೇ ತೀರಿಸೇವು? ಆದರೂ ಕನ್ನಡದ, ಕನ್ನಡನಾಡಿನ ಮಮತೆಯ ಬಂಧನ ನನ್ನನ್ನು ಸೆಳೆಯುತ್ತಾ ಇದೆ. ಹತ್ತಿರ ಇದ್ದಾಗ ಇದ್ದುದಕ್ಕಿಂತ ದೂರದಲ್ಲಿ ಈ ಸಾವಿರಾರು ಮೈಲಿಗಳಾಚೆ ಅದರ ಬಿಗುಹು ಮಿಗಿಲಾಗಿದೆ. ಅದಕ್ಕೇ ಏನೋ ದೊಡ್ಡೋರು ಹೇಳಿರೋದು, 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಅಂತ."

"ನನಗೇನು ನನ್ನ ನಾಡಿನ, ನನ್ನ ಜನದ ಅಭಿಮಾನ ಇಲ್ಲಾಂತ ತಿಳಿದಿದೀಯಾ? ಆದರೆ ಅನ್ನ ನೀರಿನ ಋಣ ಎಲ್ಲಿಯದಿದ್ದರೆ ಅಲ್ಲಿಗೆ ಹೋಗಬೇಕು. ಅದಕ್ಕೆ ಸಂಸ್ಕೃತದಲ್ಲಿ ಏನೋ ಒಂದು ಶ್ಲೋಕ ಬರುತ್ತೆ. ತಾಳು, ಜ್ಞಾಪಿಸಿಕೊಂಡು ಹೇಳ್ತೀನಿ........"

"ನೀವು ಏನೇ ಹೇಳಿ......" ಎಂದೇನೋ ಹೇಳಹೊರಟಿದ್ದಳು. ಅಷ್ಟುಹೊತ್ತಿಗೆ ಎಮಿಲಿ ವ್ರಜಧರ ಕುಮಾರನನ್ನು ಎತ್ತಿಕೊಂಡು ಬಂದಳು. ತಂದೆಯನ್ನು ಕಂಡೊಡನೆ, ವ್ರಜಧರ ಎಮಿಲಿಯ ಕಂಕುಳಿಂದ ಜಾರ ತೊಡಗಿದನು. ಕಾಲಂದುಗೆಯ ಝುಣ ಝುಣ ಶಬ್ದವನ್ನು ಮಾಡುತ್ತಾ ಬೇಗ ಬೇಗನೆ ಲಗುಬಗೆಯಿಂದ ಅಂಬೆಗಾಲಿಕ್ಕುತ್ತಾ ಜಯಂತನ ಬಳಿ ಬರತೊಡಗಿದನು. ಜಯಂತ ಓಡಿಬಂದು ಕುಮಾರನನ್ನೆತ್ತಿಕೊಂಡನು. ಎಮಿಲಿ ಹೊರಟುಹೋದ ಮೇಲೆ ಇಬ್ಬರೂ ಊಟ ಮಾಡಿದರು. ನಿರುಪಮ ಅಡಿಗೆಯ ಮನೆಯ ಕೆಲಸ ಮುಗಿಸಿಕೊಂಡು ಬರುವವರೆಗೂ ಜಯಂತ ಮಗುವನ್ನು ಆಡಿಸುತ್ತಿದ್ದನು. ನಿರುಪಮೆ ಬಂದು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ತೂಗತೊಡಗಿದಳು. ಜಯಂತ ಕಿರುದನಿಯಲ್ಲಿ 'ಆಡಿಸಿದಳ್ಯ ಶೋದಾ ಜಗದೋದ್ಧಾರನಾ' ಹಾಡತೊಡಗಿದನು. ನಿರುಪಮೆ ಪರವಶೆ ಯಾಗಿ ಆಲಿಸುತ್ತಾ ತೊಟ್ಟಿಲು ತೂಗುವುದನ್ನೂ ಮರೆತು ಕೇಳುತ್ತಾ ನಿಂತಳು.

ಮಗು ಮಲಗಿದ ಮೇಲೆ ಮಂಚದ ಮೇಲೆ ಬಂದು ಕುಳಿತು ವೀಳೆಯ ದೆಲೆಯನ್ನು ಮಡಿಸತೊಡಗಿದಳು. "ಇದೇನು ಎಲೆಯೋ? ಮೈಸೂರು ಚಿಗುರೆಲೆಯೆಲ್ಲಿ? ಈ ತರಗೆಲೆಯೆಲ್ಲಿ?" ಎಂದನು ಜಯಂತ.

ಅವರು ದಿನವೂ ಒಂದಲ್ಲ, ಒಂದು ವ್ಯಾಜದಿಂದ ಹಲವಾರು ಬಾರಿ ತವ್ಮ್ಮವರನ್ನು ನೆನೆಯುತ್ತಿದ್ದರು. ಈ ನಡುವೆ ಜಯಂತನಿಗೂ ಲಾಹೋರು ಬೇಸರವಾಗಿತ್ತು. ನಿರುಪಮೆಯ ಅಳಲು ಅರ್ಥವಾಗಿತ್ತು. ಎಷ್ಟಾದರೂ ಅವಳು ಎಳೆಯ ಹುಡುಗಿ. ತನ್ನ ಊರು, ತನ್ನ ಜನ, ತನ್ನದಾಗಿ ಏನೇನಿತ್ತೋ ಎಲ್ಲವನ್ನೂ ತನಗಾಗಿ ತೊರೆದು ಇಷ್ಟು ದೂರ ಬಂದಿದಾಳೆ. ಅವಳ ಮನಸ್ಸು ನೋಯುವಂತೆ ನಡೆಯಬಾರದು. ಆದಷ್ಟು ಅವಳಿಗೆ ಹಿತವಾಗುವಂತೆ ನಡೆಯಬೇಕು ಎನಿಸಿತು.

"ನಿರೂ, ಎಷ್ಟು ನಲುಗಿಹೋಗಿದ್ದೀಯೋ?.............." ಈ ಊರು ಹವಾ ನಿನಗಿನ್ನೂ ಒಗ್ಗಿಲ್ಲ........"

"ಯಾರಾರೂ ನಕ್ಕಾರೂ ಸುಮ್ಮನೀರೀಂದ್ರೆ........"

"ಸಾಕೋ, ಇನ್ನೂ ಬೇಕೋ ನನ್ನ ಸಹವಾಸ ಸುಖ."

"ಯಾಕೆ ?"

"ನೋಡಿದೆಯೋ ಇಲ್ಲವೋ? ಬೇಸಗೆಯ ಆ ಉರಿಬಿಸಿಲು. ಚಳಿಗಾಲದ ಈ ಕೊರೆತ. ಆರು ತಿಂಗಳು ಹೀಗೆ, ಆರು ತಿಂಗಳು ಹಾಗೆ. ಮಧ್ಯಸ್ಥ ಎನ್ನುವ ಬಾಬೇ ಇಲ್ಲ. ಅತಿವೃಷ್ಟಿ, ಇಲ್ಲಾ ಅನಾವೃಷ್ಟೀ ಅನ್ನೋ ಹಾಗೆ."

"ಹಾಗೆ ನೋಡಿದರೆ ನಮ್ಮೂರು ಸುಖದ ಸುಪ್ಪತ್ತಿಗೆ. ಆದರೆ ಏನು ಅನುಭವಿಸಿದರೂ ನಿಮ್ಮ ಜೊತೇಲೆ ಅನುಭವಿಸುತ್ತೇನೆ. ಅದೇ ನನ್ನ ತೃಪ್ತಿ."

"ಹೌದು ನಿರುಪಮಾ. ನೀನೂ ಇಲ್ಲದಾಗ, ಕುಮಾರನೂ ಇಲ್ಲದಾಗ, ನೀನು ಬರುವ ಮೊದಲು ಆ ಎಂಟು ತಿಂಗಳು ಹೇಗೆ ಕಳೆದಿರಬೇಕು? ಯೋಚಿಸು. ಈಗಲಾದರೆ ಮತ್ಯಾರಿಲ್ಲದಿದ್ದರೂ ನಿನಗೆ ನಾನು ಜೊತೆ, ನನಗೆ ನೀನು ಜೊತೆ, ನಮ್ಮಿಬ್ಬರಿಗೆ ಕುಮಾರನ ಜೊತೆಯಾಗಿದೆ."

"ಅಲ್ಲಿದ್ದಾಗ ನಿಮ್ಮ ನೆನಪು ನನ್ನ ಕೊರೆಯುತಾ ಇತ್ತು. ಈಗ ಊರ ನೆನಪು ನಮ್ಮನ್ನು ಇರಿಯುತ್ತಿದೆ."

"ಅದಿರಲಿ, ಹೋಗಿ ಆ ಪಿಟೀಲು ಪೆಟ್ಟಿಗೆ ತರುತ್ತೀಯಾ?"

ನಿರುಪಮ ಒಡನೆಯೇ ಓಡಿಹೋಗಿ ಅದನ್ನು ತಂದಳು. ಜಯಂತ ಕೈಗೆ ಪಿಟೀಲನ್ನು ತೆಗೆದುಕೊಂಡು ಹಾಗೆ ಹೀಗೆ ನಾಲ್ಕು ಕಮಾನನ್ನೆಳೆದನು. ಪಿಟೀಲಿನ ತಂತಿಯ ಮೇಲೆ ಅವನ ಕೈ ಓಡತೊಡಗಿತು. ಜಡತಂತ್ರಿಯಿಂದ ನಾದಸುಧೆಯು ನಿರರ್ಗಳವಾಗಿ ಹರಿಯತೊಡಗಿತು. ಅದರೊಡನೆ ತನ್ನ ಗಂಧರ್ವ ಕಂಠವನ್ನು ಸಮನಿಸಿ ಜಯದೇವ ಕವಿಯ ಅಷ್ಟಪದಿಗಳನ್ನು ಮೃದುಮಧುರವಾಗಿ ಹಾಡತೊಡಗಿದನು. ನಿರುಪಮ ಅವನ ಕೈಯ ಓಟವನ್ನು ಬೆರಗಾಗಿ ನೋಡುತ್ತಾ, ಆ ಗಂಧರ್ವಗಾನವನ್ನು ಮೈಮರೆತು ಆಲಿಸುತ್ತಾ ಕುಳಿತಿದ್ದಳು. ನಾದನಾಮಕ್ರಿಯೆಯಲ್ಲಿ "ಕ್ಷಣಮಧು

ನಾರಾಯಣ" ಹಾಡತೊಡಗಿದಾಗ ಅದು ಅವಳನ್ನು ಅವಳ ಕನಸಿನ ಕಿನ್ನರಲೋಕದ ಕನ್ನಡದ ಹೂಬನಕ್ಕೆ ತಂದುಬಿಟ್ಟಿತು.

ಕಡೆಗೊಮ್ಮೆ ಜಯಂತ ತನ್ನ ಗಾನತಂದ್ರಿಯಿಂದ ಎಚ್ಚೆತ್ತು ಗಡಿಯಾರದ ಕಡೆಗೆ ನೋಡಿ, "ಹನ್ನೆರಡು ಆಗುತ್ತಾ ಬಂತು ನಿರುಪಮಾ, ಇನ್ನು ಮಲಗೋಣ" ಎಂದು ಪಿಟೀಲನ್ನು ಅದರ ಪೆಟ್ಟಿಗೆಯಲ್ಲಿಡುತ್ತಾ ಹೇಳಿದನು.

ನಿದ್ರೆ ಅವರನ್ನು ಕನ್ನಡ ನಾಡಿನ ತೌರತೊಟ್ಟಿಲಲ್ಲಿಟ್ಟು, ಮಲೆನಾಡ ಮಮತೆಯ ಮಡಲಿನಲ್ಲಿಟ್ಟು ತೂಗಿತು.

# ಶಿವಾನಿ

## ೧

"ಶಿವಾನೀ, ಶಿವಾನೀ...."

ಎಷ್ಟು ಕೂಗಿದರೂ ಪ್ರತ್ಯುತ್ತರ ಬರಲಿಲ್ಲ. ಸುರೇಶಚಂದ್ರ ಮುಖರ್ಜಿ ಬೆರಳ ತುದಿಯಿಂದ ಬಾಗಿಲನ್ನು ತಟ್ಟುತ್ತಿದ್ದಂತೆಯೇ ಬಾಗಿಲು ತಾನಾಗಿಯೇ ತೆರೆದುಕೊಂಡಿತು. ಒಳಹೊಕ್ಕು ನೋಡಿದನು. ಮನೆಯಲ್ಲೆಲ್ಲೂ ಶಿವಾನಿ ಕಂಡುಬರಲಿಲ್ಲ. ಅವನು ಆಫೀಸಿನಿಂದ ಬರುವಹೊತ್ತಿಗೆ ನಿತ್ಯವೂ ಶಿವಾನಿ ಹೊಸತಿಲಲ್ಲಿ ಕಾದು ನಿಂತಿರುತ್ತಿದ್ದಳು. ನಗೆಮುಗುಳನ್ನೆರಚಿ, ಮೃದು ನುಡಿಗಳಿಂದ ಸ್ವಾಗತವನ್ನು ಬಯಸುತ್ತಿದ್ದಳು. ಇಂದೇಕೆ ಈ ವಿಪರೀತ ಪರಿಯೋ, ಗೊತ್ತಾಗಲಿಲ್ಲ. 'ಬಾಗಿಲನ್ನೂ ಹಾಕಿಕೊಳ್ಳದೆ ಎಲ್ಲಿಗೆ ಹೋಗಿದ್ದಾಳು?' ಎಂದು ಯೋಚಿಸತೊಡಗಿದನು. ಯಾವುದೋ ಶಂಕೆಯಿಂದ ಅವನು ಉದ್ವಿಗ್ನನಾದನು. ಉಸ್ಸೆಂದು ನಿಟ್ಟುಸಿರುಬಿಟ್ಟು, ಸೋತುಹೋದವನಂತೆ ಪಲ್ಲಂಕದ ಮೇಲೆ ಕುಳಿತುಕೊಂಡನು.

ಮೂಲೆಯೊಂದರಲ್ಲಿ ಅವನಿಗೆ ಕಾಣದಂತೆ ಅವಿತುಕೊಂಡಿದ್ದ ಶಿವಾನಿ, ಛಂಗನೆ ಹಾರಿಬಂದು ಅವನನ್ನಪ್ಪಿಕೊಂಡು ಕಿಲಕಿಲನೆ ನಕ್ಕುಬಿಟ್ಟಳು. ಸುರೇಶಚಂದ್ರನು ಅವಳನ್ನು ಅಡಿಯಿಂದ ಮುಡಿಯವರೆಗೆ ದಿಟ್ಟಿಸಿ ನೋಡಿದನು. ಮಿರುಮಿರುಗುವ ನೀಲಿಯ ಮಖಮಲ್ಲಿನ ಸಾಲ್ವಾರ್ ಹಾಕಿಕೊಂಡು, ಚಮಕಿಯ ಕೆಲಸ ಮಾಡಿದ ಅದೇ ಬಣ್ಣದ ತುಂಬು ತೋಳಿನ ಗುತ್ತನಾದ ಜಾಕೀಟ್ ತೊಟ್ಟು, ಗಾಳಿಯಂತೆ ನವುರಾದ, ತುಂಬ ನಾಜೂಕಾದ ಕಸೂತಿ ಕೆಲಸಮಾಡಿದ ತೆಳ್ಳನೆಯ ಬಿಳಿಯ ಓಡನಿ (ಉತ್ತರೀಯ) ಯನ್ನು ಹೊದೆದಿದ್ದಳು. ಕೊರಳಿನಲ್ಲಿ ಮಹಾರಾಷ್ಟ್ರ ತರುಣಿಯಂತೆ ಎರಡೆಳೆಯ ಸೊಗಸಾದ ಮುತ್ತಿನ ಹಾರವನ್ನು ಧರಿಸಿದ್ದಳು. ಬೈತಲೆ ಸಿಂಧೂರದಿಂದ ಅಂಕಿತವಾಗಿತ್ತು. ಕಾಡಿಗೆಯನ್ನು ತೀಡಿದ್ದ ಕಣ್ಣುಗಳು ವಜ್ರಮಣಿಗಳಂತೆ ಉಜ್ವಲವಾಗಿ ಹೊಳೆಯುತ್ತಿದ್ದುವು. ಸುರೇಶ

ಅವಳನ್ನು ಎಷ್ಟುಸಾರಿ ನೋಡಿಲ್ಲ? ಆದರೂ ಅವನ ಕಣ್ಣಿಗೆ ಅವಳು, ನೋಡಿದಷ್ಟೂ ನಿತ್ಯನೂತನವಾಗಿ, ಚೇತೋಹಾರಿಯಾಗಿ ತೋರುತ್ತಿದ್ದಳು.

"ಇದೇನು, ಹೀಗೆ ದುರುಗುಟ್ಟಿಕೊಂಡು ನೋಡುತ್ತಾ ಇದೀರಿ?" ಎಂದು ನಗುತ್ತಾ ಕೇಳಿದಳು ಶಿವಾನಿ.

"ಇಂದು ಎಷ್ಟು ಚೆಲುವಾಗಿ ಕಾಣ್ತಾಯಿದ್ದೀ ಶಿವಾನಿ! ನನ್ನ ಶಿವಾನಿಯನ್ನು ಎಷ್ಟು ನೋಡಿದರೂ ನನಗೆ ತೃಪ್ತಿಯೇ ಆಗೋಲ್ಲ!"

ಅವಳು ನಾಚಿಕೆಯಿಂದ ಮುಖವನ್ನು ಬೇರೆಯ ಕಡೆ ತಿರುಗಿಸಿಕೊಂಡಳು. ಸುರೇಶಚಂದ್ರನು ಅವಳನ್ನು ಬರಸೆಳೆದು, ಅವಳ ಹಾಲುಗಲ್ಲದಮೇಲೆ ಹೂಮುತ್ತನ್ನೊತ್ತಿದನು.

"ಶಿವಾನೀ, ನೀನು ನನ್ನನ್ನು ಎಷ್ಟು ಗಾಬರಿಪಡಿಸಿದೆ?"

"ಏಕೆ?"

"ಯಾರಾದರೂ ನಿನ್ನನ್ನು ಕದ್ದುಕೊಂಡು ಹೋದರೋ ಅಥವಾ ನೀನೇ ಮನೆಬಿಟ್ಟು ಹೋಗಿಬಿಟ್ಟೆಯೋ ಏನೋ, ಎಂದು ಭಯವಾಗಿತ್ತು!"

ಶಿವಾನಿ ಅವನ ಬಾಯಮೇಲೆ ಕೈಯಿಟ್ಟು ಹೇಳಿದಳು: "ಛೆ! ಛೆ! ಎಲ್ಲಾದರೂ ಉಂಟೆ? ನಿಮ್ಮನ್ನು ಆಶ್ಚರ್ಯಪಡಿಸೋಣವೆಂದು ತಮಾಷೆಗಾಗಿ ಅವಿತುಕೊಂಡಿದ್ದೆ ಅಷ್ಟೆ; ನನ್ನ ಕೀಟಲೆಯ ಸ್ವಭಾವ ನಿಮಗೆ ಗೊತ್ತಿಲ್ಲವೆ? ಅದಕ್ಕಾಗಿ ಇಷ್ಟು ಗಾಬರಿ ಬೀಳೋದೆ? ಚೆನ್ನಾಯಿತು! ಏಳಿ, ಊಟ ಮಾಡೋಣ. ಬನ್ನಿ" ಎಂದು ಹೇಳಿ ತಾನು ಅಡಿಗೆಯ ಮನೆಗೆ ಹೋದಳು.

ಇಬ್ಬರೂ ಜೊತೆಯಲ್ಲಿಯೇ ಊಟಕ್ಕೆ ಕುಳಿತರು. ಸುರೇಶಚಂದ್ರನು ಅನ್ಯಮನಸ್ಕನಾಗಿ ಊಟ ಮಾಡುತ್ತಿದ್ದನು. ಶಿವಾನಿ ಎಷ್ಟು ಉಪಚಾರ ಮಾಡಿ ಬಡಿಸಿದರೂ, ಊಟ ಅವನ ಗಂಟಲೊಳಗಿಳಿಯಲಿಲ್ಲ. ಗಂಡನಿಗೆ ಇಷ್ಟವೆಂದು ಅವಳು ಪರಮಲ್ ಮತ್ತು ಆಲೂಗಡ್ಡೆಯ ಪಲ್ಯವನ್ನುಮಾಡಿ, ಪೂರಿ, ಬಟಾಣಿಯ ಭಾತ್, ಪುದೀನಾ ಚಟ್ನಿ, ಸಾಬುದಾನಾ (ಸೀಮೆಯಕ್ಕಿಯ) ಹಲ್ವಾ ಮಾಡಿದ್ದಳು. ಮೊದಲಸಲ ಬಡಿಸಿದ್ದರಲ್ಲೇ ಅರ್ಧಕ್ಕರ್ಧ ತಟ್ಟೆಯಲ್ಲುಳಿದಿತ್ತು.

"ಏಕೆ, ಮೈಯಲ್ಲಿ ಸರಿಯಾಗಿಲ್ಲವೆ? ಅಥವಾ ಅಲ್ಲೇ ಏನಾದರೂ ತಿಂದುಕೊಂಡು ಬಂದಿದ್ದೀರೋ? ಊಟವನ್ನೇ ಮಾಡಲಿಲ್ಲವಲ್ಲಾ?"

"ಇಲ್ಲ, ಇಲ್ಲ. ಇಂದೇಕೋ ಹಸಿವೆಯೇ ತೋರದು!" ಎಂದ ಸುರೇಶಚಂದ್ರ.

"ಏನೋ ಯೋಚನೇಲಿರೋ ಹಾಗೆ ಕಾಣುತ್ತೆ! ಏನೆಂದು ನನಗೆ ಹೇಳಬಾರದೆ?" ಮೃದುಸ್ವರದಲ್ಲಿ ಕೇಳಿದಳು ಶಿವಾನಿ.

ಸುರೇಶಚಂದ್ರ ಅವಳ ಮಾತಿಗೆ ಉತ್ತರ ಕೊಡಲಿಲ್ಲ. ಕೈ ತೊಳೆದು ಕೊಂಡು ಎದ್ದನು. ಮಲಗುವ ಮನೆಗೆ ಹೋಗಿ ಮಂಚದ ಮೇಲೆ ಬಿದ್ದು ಕೊಂಡನು. ಶಿವಾನಿಯೂ ಅವನನ್ನು ಹಿಂಬಾಲಿಸಿ ಬಂದು, ಅವನು ಮಲಗಿಕೊಂಡಿರುವುದನ್ನು ನೋಡಿ ಚಕಿತಳಾಗಿ ಕೇಳಿದಳು: "ಏನು, ಪುನಃ ಆಫೀಸಿಗೆ ಹೋಗೋಲ್ವೆ? ಮಲಗಿಬಿಟ್ಟಿರಲ್ಲಾ?"

"ಇಲ್ಲ. ಮಧ್ಯಾಹ್ನ ರಜಾ ತೆಗೆದುಕೊಂಡಿದ್ದೇನೆ."

ತನ್ನ ಇನಿಯನು ಮಧ್ಯಾಹ್ನವೆಲ್ಲಾ ತನ್ನೊಡನೆಯೇ ಇರುವನಲ್ಲಾ ಎಂದು, ಅವಳು ಉಬ್ಬಿಹೋದಳು. ಸುರೇಶಚಂದ್ರ ಅವಳ ಕೋಮಲ ಕರಪಲ್ಲವವನ್ನು ತನ್ನ ಕೈಯಲ್ಲಿ ಮೃದುವಾಗಿ ಹಿಡಿದುಕೊಂಡು ನುಡಿದನು: "ನಿಜವಾಗಿ ಹೇಳು ಶಿವಾನೀ, ನೀನು ಇಲ್ಲಿ ಸುಖವಾಗಿದ್ದೀಯಾ?"

"ನಾನು ನಿಮ್ಮ ಬಳಿ ಸುಖವಾಗಿಲ್ಲದಿದ್ದರೆ ವೈಕುಂಠದಲ್ಲೂ ಸುಖ ವಾಗಿರಲಾರೆ!"

ಸುರೇಶಚಂದ್ರ ಅವಳ ಬಾಯಲ್ಲಿ ವೈಕುಂಠ ಎಂಬ ಶಬ್ದವನ್ನು ಕೇಳಿ ಫಕ್ಕನೆ ನಕ್ಕುಬಿಟ್ಟನು.

"ಇದೀಗ ಪಕ್ಕಾ ಬಂಗಾಳೀ ಹುಡುಗಿಯಂತೆ ಮಾತಾಡಿದೆ. ವೈಕುಂಠ ವೆಂದರೆ ಏನೆಂದು ನಿನಗೆ ಗೊತ್ತುಂಟೋ?"

"ವೈಕುಂಠವನ್ನು ವರ್ಣಿಸುವುದಕ್ಕೆ ನಾನೇನೂ ಕವಿಯಲ್ಲ. ಆದರೂ ನನಗೆ ತಿಳಿದಿರುವಮಟ್ಟಿಗೆ ಹೇಳುತ್ತೇನೆ: ವೈಕುಂಠವೆಂದರೆ ಜಗತ್ತಿಗೇ ತಾಯಿತಂದೆಗಳಾದ ಲಕ್ಷ್ಮೀನಾರಾಯಣರಿರುವ ಆವಾಸಸ್ಥಾನ, ಪುಣ್ಯಾತ್ಮ ರಾದವರು ಸತ್ತಮೇಲೆ ಹೋಗಿ ಸೇರಿ ಸುಖವಾಗಿರುವ ಸ್ಥಳ ಅಲ್ಲವೆ? ಆದರೆ ಒಂದು ಮಾತ್ರ ನನಗೆ ಚೆನ್ನಾಗಿ ಗೊತ್ತು. ತಾವು ಒಂದು ವೇಳೆ

ವೈಕುಂಠದಲ್ಲಿ ಇಲ್ಲದೆ ನಾನೊಬ್ಬಳೇ ಇರುವಂತಾದರೆ, ನನಗೆ ಅಲ್ಲಿ ಈ ಪುಟ್ಟ ಮನೆಯಲ್ಲಿ ದೊರಕುತ್ತಾಯಿರುವ ಆನಂದ ಖಂಡಿತಾ ದೊರಕಲಾರದು. ಅಲ್ಲಿಯೂ ನಾನು ಆನಂದವಾಗಿರಲಾರೆ.''

"ಈ ಮಾತನ್ನು ಮನಃಪೂರ್ವಕವಾಗಿ ಹೇಳುತ್ತಿದ್ದೀಯಾ ಶಿವಾನೀ?''

"ನಿಮ್ಮೊಡನೆ ಸತ್ಯವನ್ನಾಡಲು ನನಗೇನು ಭಯ? ಶಿವಾನಿ ತನ್ನ ಜೀವಮಾನದಲ್ಲೇ ಎಂದೂ ಸುಳ್ಳಾಡಿಲ್ಲ. ಎಲ್ಲಿ ಭಯವಾಗಲೀ, ಅಸತ್ಯ ವಾಗಲೀ ಇರುವುದೋ ಅಲ್ಲಿ ನಿಜವಾದ ಪ್ರೇಮ, ಸುಖಗಳಿಗೆ ಎಡೆಯೇ ಇಲ್ಲ.''

ಅಷ್ಟರಲ್ಲಿ ಯಾರೋ ಬೀದಿಯ ಬಾಗಿಲನ್ನು ತಟ್ಟಿದ ಸದ್ದಾಯಿತು. ಯಾರೆಂದು ನೋಡಲು ಶಿವಾನಿ ಎದ್ದು ಹೋದಳು. ಸಾಮಾನು ತರಲು ಪೇಟೆಗೆ ಹೋಗಿದ್ದ ಕೆಲಸದ ಹುಡುಗ ರಾಮಸ್ವರೂಪ್ ಹಿಂದಿರುಗಿ ಬಂದಿದ್ದನು. ಅವನಿಗೆ ಊಟಕ್ಕೆ ಬಡಿಸಿ, ಊಟವಾದ ನಂತರ ಅಡಿಗೆ ಮನೆಯ ಮುಸುರೆಯ ಕೆಲಸವನ್ನು ಮಾಡಿ, ಚಾ ತಯಾರಿಸುವಂತೆ ಹೇಳಿ ಬಂದಳು.

ಸುರೇಶಚಂದ್ರ ಸ್ವಲ್ಪಹೊತ್ತು ಮೌನವಾಗಿದ್ದನು. ಶಿವಾನಿಯೆ ಮಾತಿಗೆ ಪ್ರಾರಂಭಿಸಿದಳು: "ನಿಮ್ಮ ಮನಸ್ಸಿನಲ್ಲಿ ಏನೋ ಒತ್ತುತ್ತಿದೆ! ಏನೆಂದು ನೇರವಾಗಿ ಹೇಳಿಬಿಡಬಾರದೇ? ನನ್ನಿಂದ ಏನಾದರೂ ತಪ್ಪಾಯಿತೆ?''

"ಇಲ್ಲ ಶಿವಾನೀ, ಆದರೆ ನಿನಗೆ ವಿಷಯ ಹೇಗೆ ತಿಳಿಸುವುದೋ ನನಗೆ ಗೊತ್ತಿಲ್ಲ! ನನಗೆ ಆಗದವರು ಯಾರೋ, ನಾನೊಬ್ಬ ಅಪಹೃತ ಮುಸ್ಲಿಂ ತರುಣಿಯನ್ನು ಮನೆಯಲ್ಲಿಟ್ಟುಕೊಂಡಿರುವೆನೆಂದು, ಸಂಬಂಧಪಟ್ಟ ಅಧಿಕಾರಿಗಳಿಗೆ ಹೇಳಿಬಿಟ್ಟಿದ್ದಾರೆ. ಈವೊತ್ತು ಕೆಲವು ಅಧಿಕಾರಿಗಳು ತನಿಖೆಮಾಡಲು ಆಫೀಸಿಗೇ ಬಂದಿದ್ದರು. ನನ್ನ ಮೇಲಿನಧಿಕಾರಿಯು ವಿಷಯವನ್ನು ತಿಳಿದು, 'ಅನ್ಯಮತದ ಅಪಹೃತ ಸ್ತ್ರೀಯನ್ನು ಕಳ್ಳತನ ದಿಂದ ಮನೆಯಲ್ಲಿಟ್ಟುಕೊಳ್ಳುವುದು ಸರ್ಕಾರೀ ಅಧಿಕಾರಿಯಾದವನಿಗೆ ತೀರಾ ಅವಮಾನಕರವಾದುದು. ಭಾರತ ಸರ್ಕಾರಕ್ಕೆ ಇದು ಗೌರವ ತರುವ ಮಾತಲ್ಲ' ಎಂದರು. ನಾನು ಸಿಟ್ಟು, ಅಪಮಾನಗಳನ್ನು ನುಂಗಿ ಕೊಂಡು 'ನನ್ನ ಮನೆಯಲ್ಲಿರುವಾಕೆ ಅಪಹೃತ ತರುಣಿಯಲ್ಲ, ನನ್ನ

ವಿವಾಹಿತ ಪತ್ನಿ, ಧರ್ಮಪತ್ನಿ' ಎಂದು ಉತ್ತರವಿತ್ತೆ. ಸದ್ಯಕ್ಕೆ ಹೇಗೋ, ಉಪಾಯಾಂತರದಿಂದ ನಿವಾರಿಸಿದ್ದಾಯಿತು. ಆದರೆ, ಈ ಪ್ರಸಂಗದಿಂದ ನನ್ನ ಮನಸ್ಸಿನ ಶಾಂತಿ ಅಳಿದುಹೋಯಿತು. ಇಂದು ಆಫೀಸಿನಲ್ಲಿ ತುಂಬಾ ಕೆಲಸವಿದ್ದರೂ ಹೇಗೋ ಕಷ್ಟಪಟ್ಟು ರಜಾ ಪಡೆದುಕೊಂಡು ಬಂದೆ. ಅದಕ್ಕೇ ನಾನು ಬಂದಾಗ ನೀನು ಮನೆಯಲ್ಲಿಲ್ಲದಿದ್ದುದನ್ನು ಕಂಡು ಕಳವಳ ಪಟ್ಟೆ. ನಿನ್ನನ್ನು ಎಲ್ಲಿ ಕಳೆದುಕೊಳ್ಳಬೇಕಾದೀತೋ ಎಂಬ ಯೋಚನೆ ಯಿಂದಲೇ, ನನಗಿಂದು ನೀನು ರುಚಿಕಟ್ಟಾಗಿ ಮಾಡಿದ್ದ ಅಡಿಗೆ ಕೂಡಾ ರುಚಿಸಲಿಲ್ಲ.

"ದಿನವೂ ಪೇಪರನ್ನೋದುವ ನಿನಗೆ ನಾನು ಹೆಚ್ಚು ವಿವರಿಸಿ ಹೇಳ ಬೇಕಾಗಿಲ್ಲ. ಆ ಅಧಿಕಾರಿಗಳು ಯಾವ ಗಳಿಗೆಗೆ ಬೇಕಾದರೂ ನಮ್ಮ ಮನೆಗೆ ಮುತ್ತಿಗೆ ಹಾಕಬಹುದು.

"ಅಪಹೃತ ಸ್ತ್ರೀಯರನ್ನು ಹಿಂದಕ್ಕೆ ಕೊಟ್ಟುಬಿಡಬೇಕೆಂದು ಭಾರತ ಮತ್ತು ಪಾಕೀಸ್ತಾನದ ಸರ್ಕಾರಗಳೊಳಗೆ ಪರಸ್ಪರ ಒಪ್ಪಂದವಾಗಿರುವುದು ನಿನಗೆ ತಿಳಿದೇ ಇದೆ. ಪಾಕೀಸ್ತಾನ ನಮ್ಮ ಹಿಂದೂ ಸ್ತ್ರೀಯರನ್ನು ಹಿಂದಕ್ಕೆ ಕೊಡಲು ಬಹಳ ಕಳ್ಳಾಟವಾಡುತ್ತಿದೆ. ಆದರೂ ನಮ್ಮ ಕಾಂಗ್ರೆಸ್ಸಿನ ಸ್ವಯಂಸೇವಕರ ಮೆಹನತ್ತಿನ ಫಲವಾಗಿ ಈಗಾಗಲೇ ಸಹಸ್ರಾರು ಸ್ತ್ರೀಯರು ಭಾರತಕ್ಕೆ ಮರಳಿ ಬಂದಿದ್ದಾರೆ. ಸಹಸ್ರಾರು ಸ್ತ್ರೀಯರು ಇಲ್ಲಿಂದ ಪಾಕೀ ಸ್ತಾನಕ್ಕೆ ಹೋಗಿದ್ದಾರೆ.

"ಈ ವಿಚಾರದಲ್ಲಿ ಭಾರತ ಸರ್ಕಾರ ತುಂಬ ನಿಷ್ಠುರವಾಗಿ ನಡೆದು ಕೊಳ್ಳುತ್ತಿದೆ. ತನ್ನವರು ಇತರರು ಎಂಬ ಭೇದ ಅದಕ್ಕಿಲ್ಲ. ಯಾರ ಮನೆಯಲ್ಲಾದರೂ ಪಾಕೀಸ್ತಾನೀ ಹೆಂಗಸರಿದ್ದಾರೆಂದು ತಿಳಿಯಿತೆಂದರೆ ಅವರನ್ನು ಹಿಂತಿರುಗಿ ಪಡೆದು ಪಾಕೀಸ್ತಾನಕ್ಕೆ ಸಾಗಿಸುವವರೆಗೂ ಅವರು ವಿಶ್ರಾಂತರಾಗುವುದಿಲ್ಲ. ಒಂದು ವಿಧದಲ್ಲೇನೋ ಭಾರತದ ನಿಲುವು ಧರ್ಮದ ನಿಲುವು. ಆದರೆ ಅದು ಇಂದು ನಮ್ಮ ಪ್ರಾಣಕ್ಕೆ ಸಂಚಕಾರ ತಂದಂತಾಗಿದೆ."

ಉಸಿರು ಬಿಗಿಹಿಡಿದು ಅವನ ಮಾತನ್ನು ಕೇಳುತ್ತಿದ್ದ ಶಿವಾನಿಯ ಮುಖ ಕಪ್ಪಿಟ್ಟಿತು!

"ಹಾಯ್! ಇನ್ನೇನು ಗತಿ! ನಾನು ಆ ಅಧಿಕಾರಿಗಳ ಮುಂದೆ ಬಂದು ಹೇಳುತ್ತೇನೆ. ನಾನು ಅಪಹೃತ ಸ್ತ್ರೀಯಲ್ಲವೆಂದೂ, ನಾನಾಗಿಯೇ ನಿಮ್ಮನ್ನು ಒಲಿದು ಮದುವೆಯಾದೆನೆಂದೂ. ಹೇಳುತ್ತೇನೆ. ನಾನು ಖಂಡಿತ ಪಾಕೀಸ್ತಾನಕ್ಕೆ ಹೋಗುವುದಿಲ್ಲ. ಪಾಕೀಸ್ತಾನಕ್ಕೆ ಹೋಗಲು ನನಗೆ ಎಳ್ಳಷ್ಟೂ ಇಚ್ಛೆಯಿಲ್ಲ."

"ನನ್ನ, ನಿನ್ನ ಇಷ್ಟವನ್ನು ಯಾರು ಕೇಳುತ್ತಾರೆ, ಶಿವಾನಿ?"

ಶಿವಾನಿ ಅವನನ್ನಪ್ಪಿಕೊಂಡು, ಅವನ ವಕ್ಷಸ್ಥಲದಲ್ಲಿ ತಲೆಯಿಟ್ಟು ಉದ್ವೇಗದಿಂದ ಹೇಳಿದಳು: "ಆಪ್‌ಕೋ ಛೋಡ್‌ಕರ್ ಮೈ ಕಹೀಭೀ ನಜಾವುಂಗೀ, ಮೈ ಕಭೀ ನಜಾವುಂಗೀ (ನಾನು ನಿಮ್ಮನ್ನು ಬಿಟ್ಟು ಎಲ್ಲಿಯೂ ಹೋಗಲಾರೆ; ಯಾವಾಗಲೂ ಹೋಗಲಾರೆ).

ಸುರೇಶಚಂದ್ರ ಅವಳ ಸಿರಿಗುರುಳನ್ನು ನೇವರಿಸುತ್ತಾ ಹೇಳಿದನು: "ಶಿವಾನೀ, ಅವರು ನನಗೇನೂ ಶಿಕ್ಷೆ ವಿಧಿಸಲಾರರು. ಶಿಕ್ಷೆಯ ಭಯ ವೇನೂ ನನಗಿಲ್ಲ. ಆದರೆ, ನಿನ್ನನ್ನು ಎಲ್ಲಿ ಕಳೆದುಕೊಳ್ಳಬೇಕಾದೀತೋ ಎಂಬ ಯೋಚನೆಯಿಂದ ಹಣ್ಣಾಗಿದ್ದೇನೆ. ನನ್ನ ಆಸ್ತಿಪಾಸ್ತಿಗಳೆಲ್ಲಾ ನಾಶವಾಗಿದ್ದರೂ ನನಗಿಷ್ಟು ಚಿಂತೆಯಾಗುತ್ತಿರಲಿಲ್ಲ. ನೀನೇ ನನ್ನ ಅಮೌಲ್ಯ ನಿಧಿಯಾಗಿರುತ್ತಿದ್ದೆ. ನನ್ನ ಕೆಲಸ ಹೋಗಿದ್ದರೂ ನಾನು ಅಷ್ಟಾಗಿ ಲಕ್ಷಿಸುತ್ತಿರಲಿಲ್ಲ. ಎಲ್ಲಾದರೂ ಕೂಲಿಮಾಡಿ ಒಡಲು ಹೊರೆಯು ತ್ತಿದ್ದೆ. ಆದರೆ ನೀನು ಹೋದರೆ, ಶಿವಾನೀ, ನನ್ನ ಸರ್ವಸ್ವವೂ ಶೂನ್ಯ ವಾಗಿಬಿಡುತ್ತದೆ."

"ಈ ಕುತ್ತದಿಂದ ನಾವು ಪಾರಾಗುವ ಬಗೆ ಹೇಗೆ? ನಾವು ವೇಷ ಬದಲಾಯಿಸಿಕೊಂಡು ಎಲ್ಲಾದರೂ ತಲೆಮರೆಸಿಕೊಂಡು ಹೋದರೋ? ಹೇಗಾದರೂ ನನ್ನನ್ನು ಉಳಿಸಿಕೊಳ್ಳಿ, ಸುರೇಶಬಾಬು!"

"ನಿನ್ನ ಯೋಚನೆ ಸಾಧುವಾದುದಲ್ಲ. ಎಲ್ಲಿಗೆ ತಾನೇ ನಾವು ತಪ್ಪಿಸಿ ಕೊಂಡು ಹೋಗಬಲ್ಲೆವು? ಇಂದಲ್ಲ, ನಾಳೆ ಸಿಕ್ಕಿಬೀಳುವ ಭಯ ಇದ್ದೇ ಇರುತ್ತೆ. ಅಲ್ಲದೆ ಅದಕ್ಕೆ ನಮಗೆ ತಕ್ಕಷ್ಟು ಸಮಯವೂ ಇಲ್ಲ. ಯಾವ ನಿಮಿಷದಲ್ಲಿ ಬೇಕಾದರೂ ಅವರು ಬರಬಹುದು. ಅವರಿಗೆ ಲಂಚ ಕೊಟ್ಟು ಬಚಾವಾಗುವುದು ನನ್ನ ಗೌರವಕ್ಕೆ ತಗದು. ಜಗದಂಬೆಯ ಕೃಪೆಯಿಂದ

ನಿನ್ನನ್ನುಳಿಸಿಕೊಳ್ಳಲು ಲಕ್ಷ ರೂಪಾಯಿ ಬೇಕಾದರೂ ಕೊಡಬಲ್ಲೆ. ಆದರೆ, ಬಹುಶಃ ಅವರು ಲಂಚವನ್ನು ತೆಗೆದುಕೊಳ್ಳಲಾರರು. ಅಲ್ಲದೆ, ನಾನು ಲಂಚ ಕೊಡಹೋದೆನೆಂದು ಗೊತ್ತಾದರೆ ಶಿಕ್ಷೆಗೆ ಗುರಿಯಾಗುವುದಲ್ಲದೆ, ಪರಿಸ್ಥಿತಿ ಇನ್ನಿಷ್ಟು ರಾದ್ಧಾಂತಕ್ಕಿಟ್ಟುಕೊಳ್ಳಬಹುದು. ಹಿಂದೆ ಮುಂದೆ ನೋಡದೆ ಮುಘಂ ಎಂದು ನುಗ್ಗಿದರೆ ನಮಗೇ ಅಪಾಯ. ಯಾವ ಕೆಲಸಕ್ಕೂ ಮುನ್ನ ಸಾಧಕ-ಬಾಧಕಗಳನ್ನು ತೂಗಿ ನೋಡಬೇಕು.''

ಸುರೇಶಚಂದ್ರನ ಮಾತು ಅವಳ ಕಿವಿಗೆ ಬೀಳುತ್ತಿತ್ತೋ ಇಲ್ಲವೋ! ಅವಳು ಮಗುವಿನಂತೆ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಭಯ, ಆತಂಕಗಳಿಂದ ಅವಳ ದೇಹಾದ್ಯಂತವೂ ತರಗೆಲೆಯಂತೆ ನಡುಗುತ್ತಿತ್ತು. ಅತ್ತು ಅತ್ತು ಕಣ್ಣುಗಳೆರಡೂ ಕೆಂದಾವರೆಯ ದಳಗಳಾಗಿದ್ದುವು. ಮುಖ ಬಾಡಿ ಬಸವಳಿದುಹೋಗಿತ್ತು. ಸುರೇಶಚಂದ್ರ ಅವಳನ್ನು ಹೇಗೆ ಸಮಾಧಾನ ಪಡಿಸುವುದೋ ಗೊತ್ತಾಗದೆ ಚಡಪಡಿಸುತ್ತಿದ್ದನು. ಕಡೆಗೆ ಅತ್ಯಂತ ವ್ಯಾಕುಲನಾಗಿ ಕ್ಷೀಣಸ್ವರದಲ್ಲಿ ಹೇಳಿದ: "ಏಳು ಶಿವಾನೀ, ಸಮಾಧಾನ ತಂದುಕೋ. ಹೀಗೆ ಅಳುತ್ತಿದ್ದರೆ ಕಣ್ಣೇನಾಗಬೇಕು? ಮುಂದೆ ಸಂಭವಿಸಬಹುದಾದ ಕುತ್ತವನ್ನು ಚಿಂತಿಸಿಯೇ ಹೀಗೆ ಧೃತಿಗೆಟ್ಟರೆ ಹೇಗೆ? ಈ ವಿಪತ್ತಿನಿಂದ ಪಾರಾಗುವುದು ಹೇಗೆಂದು ಇಬ್ಬರೂ ಉಪಾಯ ಹುಡುಕೋಣ. ನಾನೂ ನಿನ್ನನ್ನುಳಿಸಿಕೊಳ್ಳಲು ನನ್ನ ಕೈಯಲ್ಲಾದ ಪ್ರಯತ್ನವನ್ನೆಲ್ಲಾ ಮಾಡುತ್ತೇನೆ. ಇಷ್ಟರಮೇಲೆ ಈಶ್ವರೇಚ್ಛೆಯಿದ್ದಂತಾಗಲಿ.''

ಅವನ ಮಾತನ್ನು ಕೇಳಿ ಶಿವಾನಿ ಪ್ರಯತ್ನಪೂರ್ವಕವಾಗಿ ಉಕ್ಕಿ ಬರುತ್ತಿದ್ದ ದುಃಖವನ್ನು ತಡೆದುಕೊಂಡಳು. ಆದರೆ ಕಳೆಯೇ ಇಲ್ಲದ ಅವಳ ಮುಖ ಬೆಳಗಿನಜಾವದ ಚಂದ್ರನಂತಿತ್ತು.

ರಾಮಸ್ವರೂಪ್ ಬಂದು "ಚಾ ತಯಾರ್‌ಹೈ'' ಎಂದು ಒಂದು ಟ್ರೇಯಲ್ಲಿ ಟೀಪಾತ್ರೆ, ಕಪ್ಪುಗಳನ್ನು ತಂದಿಟ್ಟನು. ಅವನು ತಂದು ಕೊಟ್ಟ ಟೀಯನ್ನು ಇಬ್ಬರೂ ಮೌನವಾಗಿ ಕುಡಿದು ಮುಗಿಸಿದರು. ಇಬ್ಬರ ಮನಸ್ಸಿನಲ್ಲೂ ಒಂದೇ ಯೋಚನೆ: ಬರಲಿರುವ ವಿಪತ್ತಿನಿಂದ ಹೇಗೆ ಪಾರಾಗುವುದೆಂದು. ಎಂದಿನಂತೆ ನಗು, ಸರಸ, ಮಾತು ಎಲ್ಲಾ ನಿಂತು ಹೋಗಿತ್ತು.

ಅಂದಿನಿರುಳು ಇಬ್ಬರಿಗೂ ನಿದ್ದೆ ಹತ್ತಲಿಲ್ಲ. ಅವರ ಮನಸ್ಸಿನಲ್ಲಿ ನಾನಾ ತೆರನಾದ ಯೋಚನೆಗಳು ತರಂಗತರಂಗವಾಗಿ ಏಳುತ್ತಿದ್ದುವು.

೨

ಶಿವಾನಿ ಬಿಹಾರದ ಒಬ್ಬ ಮುಸ್ಲಿಂ ತರುಣಿ. ಅವಳ ಪೂರ್ವದ ಹೆಸರು ಕುರ್ಷೀದ್ ಎಂದು. ಅವಳು ಸೂಳೆಯರ ಮಗಳು. ಅವರ ಕುಲದ ಕಸುಬೇ ಸೂಳೆಗಾರಿಕೆಯಾಗಿತ್ತು. ಅವಳ ತಾಯಿ ಹಬೀಬುನ್ನೀಸಾ ಧನಿಕಳಲ್ಲದಿದ್ದರೂ ಮಗಳನ್ನು ಇಂಟರ್‌ವರೆಗೆ ಹೇಗೋ ಶ್ರಮಪಟ್ಟು ಓದಿಸಿದ್ದಳು. ಚೆನ್ನಾಗಿ ಸಿತಾರ್ ನುಡಿಸುವುದನ್ನೂ ಕಲಿಸಿದ್ದಳು. ಜೊತೆಗೆ ಕುರ್ಷೀದ್ ಸ್ವಲ್ಪ ನಾಟ್ಯವನ್ನೂ ಕಲಿತಿದ್ದಳು. ತಾಯಿ, ಪ್ರಬುದ್ಧೆಯಾದ ರೂಪಲಾವಣ್ಯದಿಂದ ತುಂಬಿ ತುಳುಕುತ್ತಿದ್ದ ಮಗಳನ್ನು ನೋಡಿ 'ಇನ್ನೇನು, ಇವಳು ನನ್ನ ಮನೆಯಲ್ಲಿ ಹೊನ್ನಿನ ಮಳೆಗರೆಯುತ್ತಾಳೆ! ನನ್ನ ಕಾಲ ಮುಗಿದರೂ ಚಿಂತೆಯಿಲ್ಲ' ಎಂದು ಸಂಭ್ರಮದಲ್ಲಿದ್ದಳು. ಕೆಲವು ಧನಿಕರ ಕಾಕದೃಷ್ಟಿಯೂ ಆಗಲೇ ಕುರ್ಷೀದಳ ಮೇಲೆ ಬಿದ್ದಿತ್ತು. ಆದರೆ ಸೂಳೆಯ ಮಗಳಾಗಿ ಹುಟ್ಟಿದರೂ ಅವಳು ಕೆಸರಿನ ಕಮಲವಾಗಿದ್ದಳು. ಆ ಹೊಲಸು ಬಾಳು ಅವಳಿಗೆ ಜಿಗುಪ್ಸೆಯನ್ನು ಹುಟ್ಟಿಸಿತ್ತು. ಸುತ್ತಮುತ್ತ ನಡೆಯುತ್ತಿದ್ದ ಅನ್ಯಾಯ, ಪಾಪ, ತುಂಬಿದ್ದ ಕೊಳಕು, ರೋಗ ರುಜಿನ, ದಾರಿದ್ರ್ಯಗಳನ್ನು ಕಂಡು ಅವಳ ಮನಸ್ಸು ರೋಸಿಹೋಗಿತ್ತು. ಯಾವ ಜನ್ಮದ ಪುಣ್ಯಫಲವೋ, ಪೂರ್ವಸಂಸ್ಕಾರದ ಬಲವೋ ಅವಳನ್ನು ಧರ್ಮಪಥದತ್ತ ತಿರುಗಿಸಿತ್ತು. ಅವಳ ವಿಚಾರವಾಹಿನಿ ಹೊಸ ಹಾದಿಯಲ್ಲಿ ಹರಿದಿತ್ತು.

ಎಷ್ಟೋ ವೇಳೆ ಅವಳು, ತಾನು ಕುತ್ತಿಗೆಯವರೆಗೂ ಪಾಪದಲ್ಲಿ ಮುಳುಗಿರುವೆನೆಂದೂ, ತಾನಿದ್ದ ಕತ್ತಲೆಯ ಕೂಪದಿಂದ ಹೊರಬಿದ್ದು ಬೆಳಕಿನತ್ತ ಸಾಗುವ ಉಪಾಯವೇ ಇಲ್ಲವೆಂದೂ ಯೋಚಿಸುತ್ತಿದ್ದಳು. ಎಷ್ಟೋ ಜನ ಎಳೆಯ ವಯಸ್ಸಿನ ತರಳೆಯರು ಕಡುಬಡತನವನ್ನು ತಾಳಲಾರದೆಯೋ, ಕಾಮುಕತೆಯಿಂದಲೋ, ಧನದಾಶೆಯಿಂದಲೋ, ಕುಲಕ್ಕೆ ಬಂದ ಕಸುಬು ಎಂಬ ಮೌಢ್ಯದಿಂದಲೋ ದಿನದಿನವೂ ತಮ್ಮ ದೇಹವನ್ನು ಮಾರಿಕೊಂಡು, ಭಗವಂತನ ಮಂದಿರವಾದ ತಮ್ಮ ಶರೀರವನ್ನು ಭ್ರಷ್ಟ

ಗೊಳಿಸಿ, ನಾಲ್ಕು ದಿನ ಮೆರೆದರೂ ಅತ್ಯಲ್ಪ ಕಾಲದಲ್ಲೇ ಗಳಿತ ಯೌವನರಾಗಿ, ವಿಕೃತರೂಪರಾಗಿ, ಬರಬಾರದ, ಕಂಡು ಕೇಳದ ರೋಗ ಬಂದು ಅಕಾಲದಲ್ಲೇ ಮುಪ್ಪಡರಿಸಿದವರಂತಾಗಿ, ಜೀವಚ್ಛವವಾಗಿ ನವೆದು ಹೋಗುತ್ತಿರುವುದಲ್ಲದೆ, ಸಹಸ್ರಾರು ಜನರಿಗೆ ರೋಗ ಹಂಚುತ್ತಿರುವುದನ್ನೂ, ನಿರಪರಾಧಿಗಳಾಗಿ ಯಾವ ಪಾಪವನ್ನೂ ಅರಿಯದ ತಮ್ಮ ಮಕ್ಕಳು, ಮೊಮ್ಮಕ್ಕಳುಗಳಿಗೂ ಎಂದೂ ಸವೆಯದ ರೋಗದ ಆಸ್ತಿ ಹಂಚುವುದನ್ನೂ ನೋಡಿ ಮಮ್ಮಲ ಮರುಗಿದ್ದಳು. ಆ ಜನರನ್ನು ಕಂಡು ಅವಳ ಹೃದಯ ಕರುಣೆಯಿಂದ ನೀರಾಗುತ್ತಿದ್ದರೂ, ಆ ಜನರ ಪಾಪಜೀವಿತವನ್ನು ಸುಧಾರಿಸುವುದು, ಮಾರ್ಪಡಿಸುವುದು ಅವಳ ಕೈಯೊಳಗಿರಲಿಲ್ಲ. ಎಷ್ಟೋ ವೇಳೆ ಅವಳು, ಇದಲ್ಲದೆ ಬೇರೊಂದು ನರಕವೆಂಬುದಿರುವುದೇ? ಎಂದು ಯೋಚಿಸುತ್ತಿದ್ದಳು.

ತಾನು ಮಾತ್ರ ಎಂದೆಂದಿಗೂ ಆ ಕೆಸರಿನಲ್ಲಿ ಮುಳುಗಬಾರದೆಂದೂ, ಯಾವನಾದರೊಬ್ಬ ವಿದ್ಯಾವಂತ ತರುಣನನ್ನು ಮದುವೆಯಾಗಿ ಗರತಿಯಾಗಿ ಬಾಳಬೇಕೆಂದೂ, ಅದು ಸಾಧ್ಯವಿಲ್ಲದಿದ್ದರೆ ಆಜೀವವೂ ಬ್ರಹ್ಮಚಾರಿಣಿಯಾಗಿ ತನ್ನ ಹತಭಾಗ್ಯ ಭಗಿನಿಯರ ಸೇವೆಯಲ್ಲೇ ಕಾಲ ಕಳೆಯಬೇಕೆಂದೂ ಕಠೋರ ನಿಶ್ಚಯಮಾಡಿಕೊಂಡಿದ್ದಳು. ಅವಳ ನಿಶ್ಚಯವನ್ನು ಕೇಳಿ ಹಬೀಬುನ್ನೀಸಾ ಗಹಗಹಿಸಿ ನಕ್ಕುಬಿಟ್ಟಳು. ಸೂಳೆಯ ಮಗಳಿಗೆ ಮದುವೆಯೆಂದರೇನು? ಗರತಿಯಾಗಿ ಬಾಳುವುದೆಂದರೇನು? ಕುಲಕ್ಕೆ ಬಂದ ಕಸುಬನ್ನು ಅವಲಂಬಿಸಿ, ಸಾಧ್ಯವಾದಷ್ಟು ದುಡ್ಡು ಗಳಿಸಿ ಸುಖವಾಗಿರೋದು ಬಿಟ್ಟು, ಇದೆಲ್ಲಿಯ ಮೌಢ್ಯ ಎಂಬುದಾಗಿ ತಾಯಿ ತನ್ನ ಮಗಳೊಡನೆ ಪ್ರತಿ ದಿನವೂ ಕಾದಾಡುತ್ತಿದ್ದಳು.

ಇದೇ ಸಂದರ್ಭದಲ್ಲೇ ನೌಖಾಲಿ ಮತ್ತು ಬಿಹಾರಗಳಲ್ಲಿ ಗಲಭೆ ಮೊದಲಾದುದು. ಯಾರೋ ಪುಂಡರು ಹಬೀಬುನ್ನೀಸಳ ಮನೆಯನ್ನು ಸುಟ್ಟುಬಿಟ್ಟರು. ತಾಯಿ ಮಕ್ಕಳು ಎಡಗೈಯಲ್ಲಿ ಜೀವ ಹಿಡಿದುಕೊಂಡು ದಾರಿ ತೋರಿದ ಕಡೆ ಓಡಿದರು. ಕಾಮುಕಜೀವನವನ್ನು ನಡೆಸಿ, ರೋಗಗ್ರಸ್ತಳಾಗಿ ದುರ್ಬಲಳಾಗಿದ್ದ ಕುರ್ಷೀದಳ ತಾಯಿ ಪ್ರಯಾಣದ ಆಯಾಸವನ್ನು ತಡೆಯಲಾರದೆ ಎರಡು ಮೂರು ದಿನಗಳಲ್ಲೇ ತೀರಿಕೊಂಡಳು.

ಅನಾಥಳಾಗಿ ಏಕಾಕಿಯಾಗಿ ಉಳಿದ ಕುರ್ಷೀದ್, ಅಟ್ಟಿಸಿಕೊಂಡು ಬರುತ್ತಿದ್ದ ಧೂರ್ತರ ಭಯದಿಂದ ದಿಕ್ಕುತೋರಿದ ಕಡೆ ಜೀವದ ಹಂಗು ದೊರೆದು ಓಡಿದಳು. ದೈವವಶಾತ್ ಅದೇ ಸಮಯದಲ್ಲಿ ಸುರೇಶಚಂದ್ರ ಮುಖರ್ಜಿ ಶರಣಾರ್ಥಿಗಳಿಗೆ ಸಹಾಯಮಾಡಬೇಕೆಂಬ ಉದ್ದೇಶದಿಂದ, ಬಿಹಾರದಲ್ಲಿ ಪ್ರಯಾಣಮಾಡುತ್ತಿದ್ದನು. ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ ಕುರ್ಷೀದ್ ಇವನ ಕೈಗೆ ಸಿಕ್ಕಳು. ಧೂಳಿದೂಸರಿತವಸನೆಯಾಗಿ ಮ್ಲಾನವದನೆಯಾಗಿದ್ದ ಕುರ್ಷೀದ್ ತರುಣ ಸುರೇಶಚಂದ್ರನ ಕಣ್ಣಿಗೆ ಮೋಡಗಳಿಂದ ಆಚ್ಛಾದಿತವಾದ ಚಂದ್ರಕಲೆಯಂತೆ ಕಂಡಳು. ಅವಳ ಅನ್ಯಾದೃಶವಾದ ಅಲೌಕಿಕ ರೂಪ ಅವನನ್ನು ಮುಗ್ಧನನ್ನಾಗಿ ಮಾಡಿಬಿಟ್ಟಿತು.

ಅವನು ಅವಳನ್ನು ಬೊಂಬಾಯಿಗೆ ಕರೆದೊಯ್ದು ಒಂದು ಮನೆಯಲ್ಲಿಟ್ಟನು. ಅವಳು ಓಡಿಹೋಗದಂತೆ ಅಥವಾ ಆತ್ಮಹತ್ಯೆಮಾಡಿಕೊಳ್ಳದಂತೆ ಅವನು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದರೂ, ಮತ್ತಾವ ವಿಷಯದಲ್ಲೂ ಅವಳನ್ನು ಹಿಂಸೆಮಾಡಲಿಲ್ಲ. ಮನೆಯೊಳಗೆ ಅವಳಿಗೆ ಸರ್ವಸ್ವಾತಂತ್ರ್ಯವಿದ್ದಿತು. ಅವಳ ಊಟ, ಉಡಿಗೆ, ಸ್ನಾನಪಾನ, ಸಾಹಿತ್ಯವಾಚನ ಎಲ್ಲದಕ್ಕೂ ಅನುಕೂಲ ಮಾಡಿಕೊಟ್ಟಿದ್ದನು. ಬೊಂಬಾಯಲ್ಲಿ ಇದ್ದವರೆಗೂ ಅವನು ಹೋಟಲೂಟ ತರಿಸುತ್ತಿದ್ದನು. 'ಅವನು ತನ್ನ ಮೇಲೆ ಯಾವಾಗ ಅತ್ಯಾಚಾರಮಾಡುವನೊ? ತನಗೆ ಎಂಥಾ ದುರ್ಗತಿ ಕಾದಿರುವುದೋ? ಈ ಸೆರೆಯಿಂದ ಬಿಡುಗಡೆಯೆಂದಿಗೋ?' ಎಂದು ನಡುನಡುಗುತ್ತಿದ್ದ ಕುರ್ಷೀದ್, ಅವನ ನಡತೆಯನ್ನು ನೋಡಿ ತುಂಬ ಆಶ್ಚರ್ಯಪಟ್ಟಳು. ಏಕಾಕಿಯಾಗಿ, ಅಸಹಾಯಕಳಾಗಿ, ರೂಪವತಿಯಾಗಿರುವ ತನ್ನೊಡನೆ, ಒಂದೇ ಮನೆಯಲ್ಲಿ ವಾಸಿಸುತ್ತಿದ್ದರೂ, ಸಂಯಮಶೀಲನಾಗಿ ತನ್ನೊಡನೆ ಬಹಳ ಮರ್ಯಾದೆಯಿಂದಲೂ, ವಿನಯದಿಂದಲೂ ವರ್ತಿಸುವ ಈ ಬಂಗಾಳೀತರುಣನ ಬಗ್ಗೆ ಅವಳ ಕುತೂಹಲ ಕೆರಳಿತು. ಅವನು ಕೆಲವೇ ದಿನಗಳಲ್ಲಿ ತನ್ನ ಕಾವಲಿನ ಬಿಗುವನ್ನು ಸಡಲಿಸಿದರೂ, ಕುರ್ಷೀದಳಿಗೆ ತಪ್ಪಿಸಿಕೊಂಡು ಹೋಗುವ ಯೋಚನೆಯೇ ಬರಲಿಲ್ಲ. ದಿಕ್ಕಿಲ್ಲದ ತನ್ನಲ್ಲಿ ದಯೆದೋರಿದ ಮಹಾನುಭಾವನೀತ, ತನ್ನ ಆಶ್ರಯದಾತನೀತ, ಎಂಬ ಭಾವನೆ ಅವಳಲ್ಲಿ ಮೂಡಿಬಿಟ್ಟಿತು.

ಸುರೇಶಚಂದ್ರಮುಖರ್ಜಿ ಸುಶಿಕ್ಷಿತ ಬಂಗಾಳೀ ಬ್ರಾಹ್ಮಣ ತರುಣ. ಅವನು ಇಂಗ್ಲೆಂಡ್, ಅಮೇರಿಕಾಗಳಲ್ಲೆಲ್ಲಾ ಸಂಚಾರಮಾಡಿ ಬಂದಿದ್ದನು. ಅವನು ಆಧುನಿಕ, ಸುಸಂಸ್ಕೃತ ಬಂಗಾಳೀ ಸಮಾಜಕ್ಕೆ ಸೇರಿದವನಾಗಿದ್ದನು. ಧೀರೋದಾತ್ತ ಸ್ವಭಾವವುಳ್ಳ ಪ್ರಗತಿಗಾಮಿಯಾದ ತರುಣನಾಗಿದ್ದನು. ಸ್ವಾಭಾವಿಕವಾಗಿಯೇ ಅವನಿಗೆ ಸ್ತ್ರೀಯರಲ್ಲಿ ಬಹಳ ಗೌರವವಿದ್ದಿತು. ಉಚ್ಚಕುಲದ ಸಂಭಾವಿತ ಬಂಗಾಳಿ ತರುಣಿಯಲ್ಲಿ ಹೇಗೆ ವರ್ತಿಸುತ್ತಿದ್ದನೋ ಹಾಗೆಯೇ ಕುರ್ಷೀದಳಲ್ಲೂ ಸಭ್ಯತೆಯಿಂದ **ನಡೆದುಕೊಳ್ಳುತ್ತಿದ್ದನು.** ದೈವಯೋಗವಿದ್ದರೆ ಅವಳ ಮನಸ್ಸನ್ನೊಲಿಸಿಕೊಂಡು, ಅವಳನ್ನು ಮದುವೆಯಾಗಿ ತನ್ನ ಗೃಹಲಕ್ಷ್ಮಿಯನ್ನಾಗಿ ಮಾಡಿಕೊಳ್ಳಬೇಕು, ಅವಳು ತನ್ನನ್ನು ವರಿಸಲೊಪ್ಪದಿದ್ದಲ್ಲಿ ಯಾವುದಾದರೂ ಶರಣಾರ್ಥಿ ಸ್ತ್ರೀಯರ ಔದ್ಯೋಗಿಕ ಶಿಕ್ಷಣಮಂದಿರದಲ್ಲಿ ಬಿಡಬೇಕು, ಎಂಬ ಸದಿಚ್ಛೆಯಿಂದ ಕರೆತಂದಿದ್ದನೇ ಹೊರತು ಬೇರಾವ ದುರುದ್ದೇಶವೂ ಅವನಿಗೆ ಇರಲಿಲ್ಲ.

ಸುರೇಶಚಂದ್ರ ಕುರ್ಷೀದಳಿಗೆ ಸರಿದೊರೆಯಾದ ಸ್ಫುರದ್ರೂಪಿಯಲ್ಲದಿದ್ದರೂ ಕುರೂಪಿಯೇನೂ ಅಲ್ಲ. ಸೌಮ್ಯವಾದ ಮುಖ, ಕೋಮಲವಾದ ಗೌರವರ್ಣ, ಸ್ನೇಹಮಯವಾಗಿ ಕಾಂತಿಯುಕ್ತವಾದ ಕಣ್ಣುಗಳು, ಎತ್ತರವಾದ ನಿಲುವು, ನಡೆನುಡಿ ಎಲ್ಲದರಲ್ಲಿ ಎದ್ದು ಕಾಣುವ ದೊಡ್ಡತನ– ಇವೆಲ್ಲವನ್ನೂ ಕಂಡು ಅತ್ಯಲ್ಪ ಕಾಲದಲ್ಲೇ ಅವಳಿಗೆ ಅವನಲ್ಲಿ ಪ್ರೇಮವುಂಟಾಯಿತು.

ತನ್ನಲ್ಲಿ ಇಷ್ಟು ಉದಾರತನವನ್ನು ತೋರಿಸಿದ, ತನ್ನ ಆಶ್ರಯದಾತನಾದ ಸುರೇಶಚಂದ್ರನನ್ನು ಯಾವುದೇ ವಿಧದಲ್ಲಾದರೂ ಮೋಸಗೊಳಿಸಬಾರದೆಂದು ಬಗೆದು, ಅವನಿಗೆ ತನ್ನ ಪೂರ್ವೋತ್ತರವನ್ನೆಲ್ಲಾ ನಿಸ್ಸಂಕೋಚವಾಗಿ ತಿಳಿಸಿದಳು. ಆದರೆ ಅವನ ನಿಶ್ಚಯ ಬದಲಾಗಲಿಲ್ಲ. ಕುರ್ಷೀದಳ ಹೃದಯ ಕೃತಜ್ಞತೆ, ಆನಂದಗಳಿಂದ ತುಂಬಿ ಹೋಯಿತು.

**ಇಬ್ಬರೂ** ಗುಟ್ಟಾಗಿ ಮದುವೆ ಮಾಡಿಕೊಂಡು ದೆಹಲಿಗೆ **ಬಂದರು.** ಅದೃಷ್ಟವಶದಿಂದ ಸುರೇಶಚಂದ್ರನಿಗೆ ಕೈತುಂಬ ತಲುಬಿನ ಸರ್ಕಾರೀ ಉದ್ಯೋಗವೊಂದು ದೊರಕಿತು. ಅಚ್ಚುಕಟ್ಟಾದ ಪುಟ್ಟದೊಂದು

ಮನೆಯಲ್ಲಿ ಆ ಗಂಡ-ಹೆಂಡಿರು ಸುಖವಾಗಿ ಬಾಳಿದರು—ಅಲ್ಲ, ಸ್ವರ್ಗವನ್ನೇ ಸೂರೆಗೊಂಡರು.

ಸುರೇಶಚಂದ್ರ, ಶರಶ್ಚಂದ್ರರ ಕಾದಂಬರಿಯೊಂದರಲ್ಲಿ 'ಶಿವಾನಿ' ಎಂಬ ಹೆಸರನ್ನು ಓದಿದ್ದನು. ಆ ಹೆಸರು ಅವನ ಮನಸ್ಸಿಗೆ ಪ್ರಿಯವೆನಿಸಿತ್ತು. ಮದುವೆಯ ನಂತರ ಸುರೇಶಚಂದ್ರನು ಕುರ್ಷೀದಳ ಹೆಸರನ್ನು 'ಶಿವಾನಿ' ಎಂದು ಬದಲಾಯಿಸಿದನು. ಅವಳ ರೂಪಕ್ಕೆ ಆ ಮೋಹಕವಾದ ಹೆಸರು ಚೆನ್ನಾಗಿ ಒಪ್ಪುತ್ತಿತ್ತು.

ಶಿವಾನಿ, ತನ್ನ ಭಾಗ್ಯದ ದೈವ ಕಣ್ದೆರೆಯಿತೆಂದುಕೊಂಡಳು. ತನ್ನ ಬದುಕನ್ನು ಬಂಗಾರವಾಗಿ ಮಾಡಿದ್ದ ಸುರೇಶಚಂದ್ರನ ಸುಖವನ್ನೇ ತನ್ನ ಜೀವಿತದ ಪರಮಧ್ಯೇಯವಾಗಿ ತಿಳಿದಿದ್ದಳು. ಅಚ್ಚ ಹಿಂದೂ ಸ್ತ್ರೀಯಂತೆ ನಡೆದುಕೊಳ್ಳುತ್ತಿದ್ದಳು. ಆಗಾಗ ಅವನಿಂದ ರಾಮಾಯಣ, ಭಾಗವತಗಳನ್ನು ಓದಿಸಿ ಕೇಳುತ್ತಿದ್ದಳು. ರವೀಂದ್ರನಾಥ ಠಾಕೂರ್, ಬಂಕಿಂಚಂದ್ರ ಮತ್ತು ಶರಶ್ಚಂದ್ರರ ಕಾವ್ಯ, ಕಾದಂಬರಿಗಳನ್ನು ಜೊತೆಯಲ್ಲಿ ಓದುತ್ತಿದ್ದರು. ಶಿವಾನಿ ಬಂಗಾಳೀ ಯುವತಿಯರಂತೆ ಬೈತಲೆಯನ್ನು ಸಿಂಧೂರದಿಂದ ಅಲಂಕರಿಸಿಕೊಳ್ಳುತ್ತಿದ್ದಳು. ಹಣೆಯಲ್ಲಿ ಕುಂಕುಮದ ತಿಲಕವನ್ನಿಟ್ಟುಕೊಳ್ಳುತ್ತಿದ್ದಳು. ಕಾಲಿಗೆ ಅಲತಿಗೆಯ ರಸವನ್ನು ಬಳಿದುಕೊಳ್ಳುತ್ತಿದ್ದಳು.

ಅವರಿಬ್ಬರೂ ಒಬ್ಬರನ್ನೊಬ್ಬರು ಓಲೈಸಿ ನಡೆದುಕೊಳ್ಳುತ್ತಿದ್ದುದರಿಂದ ಅವರ ಸಂಸಾರ ಕ್ಷೀರಸಾಗರವಾಗಿತ್ತು. ಶಿವಾನಿ ಈಗ ಐದು ತಿಂಗಳ ಗರ್ಭಿಣಿಯಾಗಿದ್ದಳು. ತಾನು ತಾಯ್ತನದ ಪವಿತ್ರಸುಖವನ್ನು ಅನುಭವಿಸುವ ಸುದಿನ ಬಂದಿತೆಂದು ಹಿಗ್ಗಿದಳು. ಇನ್ನು ಇಹದಲ್ಲಿ ತಾನು ಬಯಸಬೇಕಾದ ಸುಖವೇನೂ ಇಲ್ಲವೆಂದೂ, ದೇವರ ಕೃಪೆ ಎಂದರೆ ಹೀಗಿರಬೇಕೆಂದೂ ಹಿಗ್ಗಿ ಹಾಡಿದಳು. ರಾಧಾವಲ್ಲಭನ ಪಟದ ಮುಂದೆ ಕುಣಿದಾಡಿದಳು.

ಇಂದು ಅವಳ ಸರ್ವನಾಶವಾಗಲಿರುವ ಸುದ್ದಿಯನ್ನು ಕೇಳಿದಳು. ಈ ಅನಿರೀಕ್ಷಿತ ಆಘಾತವನ್ನು ಅವಳು ಹೇಗೆತಾನೇ ಸಹಿಸಿಯಾಳು?

* * *

ಮರುದಿನ ಬೆಳಿಗ್ಗೆ ಅವರ ಮನದಲ್ಲಿದ್ದ ಭೂತ ಎದುರು ಬಂದು ನಿಂತಂತೆ ಅಧಿಕಾರಿಗಳು ಬಂದೇಬಂದರು, ಸುರೇಶಚಂದ್ರನು ತನ್ನ ಬುದ್ಧಿವಂತಿಕೆಯನ್ನೆಲ್ಲಾ ಉಪಯೋಗಿಸಿ ಅವರೊಡನೆ ಎಷ್ಟೆಷ್ಟೋ ಚರ್ಚೆ ನಡೆಸಿದನು. ಆಳುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ಅಂಗಲಾಚಿ ಬೇಡಿದನು. ಅವನ ವಾದದಲ್ಲಿದ್ದ ಸತ್ಯಾಂಶಗಳಿಗೆ ಕೂಡಾ ಪುರಸ್ಕಾರ ದೊರಕಲಿಲ್ಲ.

ಶಿವಾನಿ ಅಧಿಕಾರಿಗಳ ಮುಂದೆ ಬಂದು, ಲಜ್ಜೆಯನ್ನೂ ಮರೆತು ಎಷ್ಟೆಷ್ಟೋ ವಿಧದಲ್ಲಿ ತನ್ನನ್ನು ಇದ್ದಲ್ಲೇ ಇರಗೊಡುವಂತೆ ಬೇಡಿಕೊಂಡಳು. ಕಣ್ಣೀರಿನ ಹೊಳೆ ಹರಿಸಿದಳು.

"ನಾನಾಗಿ ನಾನು ಇವರನ್ನು ಒಲಿದು ಮದುವೆಯಾಗಿರುವಾಗ, ನಾನು ಹೇಗೆತಾನೇ ಅಪಹೃತ ಸ್ತ್ರೀಯಾಗುತ್ತೇನೆ? ದೇಶವನ್ನು ಕೃತಕವಾಗಿ ವಿಭಜಿಸುವ ಮೊದಲು ನಾನು ಭಾರತದ ಹೆಣ್ಣುಮಗಳಾಗಿದ್ದೆ. ಈಗ ಪಾಕೀಸ್ತಾನ ನಿರ್ಮಾಣವಾಗಿದೆಯೆಂಬ ಕಾರಣದಿಂದ, ನಾನು ಅನ್ಯಮತದವಳೆಂಬ ಕಾರಣದಿಂದ, ನನ್ನದೇನೂ ತಪ್ಪಿಲ್ಲದೆಯೇ ನಾನು ಭಾರತಕ್ಕೆ ಹೊರಗಾಗಬೇಕೇನು?

"ನಾನು ಸುರೇಶಬಾಬುಗಳನ್ನು ಮನವಾರೆ ಮೆಚ್ಚಿ ಯಾವ ನಿರ್ಬಂಧವೂ ಇಲ್ಲದೆ ಮದುವೆಯಾಗಿದ್ದೇನೆ. ಗಂಡನ ದೇಶ, ಗಂಡನ ಧರ್ಮಗಳೇ ಹೆಂಡತಿಯ ದೇಶ, ಹೆಂಡತಿಯ ಧರ್ಮಗಳಾಗಲಾರವೇನು? ನನ್ನನ್ನು ಇವರು ಬಲಾತ್ಕಾರದಿಂದ ಕೆಡಿಸಿದ್ದರೆ ಆ ಮಾತು ಬೇರೆಯಿತ್ತು. ನಾನೆಂದೂ ಜೀವಸಹಿತ ಪಾಕೀಸ್ತಾನಕ್ಕೆ ಮರಳಲಾರೆ" ಎಂದು ಮೊದಲಾಗಿ ವಾದಿಸಿದಳು. ಅವಳ ತರ್ಕಬದ್ಧವಾದ, ನ್ಯಾಯವಾದ ವಾದ ಅರಣ್ಯರೋದನವಾಯಿತು. ಅವಳು ಅವನೊಡನೆ ಬಂದಿದ್ದ ಇಬ್ಬರು ಕಾಂಗ್ರೆಸ್ ಸ್ವಯಂಸೇವಕಿಯರ ಬಳಿಗೆ ಹೋಗಿ ಕಣ್ಣೀರು ಹಾಕುತ್ತಾ ಹೇಳಿದಳು: "ನೀವು ಹೆಂಗಸರು. ನೀವಾದರೂ ಹೆಂಗಸಿನ ದುಃಖವನ್ನು ತಿಳಿದುಕೊಳ್ಳಲಾರಿರಾ? ನಾನು ಇನ್ನು ಕೊಂಚ ಕಾಲದಲ್ಲೇ ಮಗುವಿನ ತಾಯಿಯಾಗುವವಳಿದ್ದೇನೆ. ನಾನು ಹೇಗೆತಾನೇ ಇವರನ್ನು ಬಿಟ್ಟು ಹೋಗಬಲ್ಲೆ?"

ಅವರು ಹೇಳಿದರು: "ಬಹೆನ್‌ಜೀ, ನಿಮ್ಮ ಪರಿಸ್ಥಿತಿಯನ್ನು ನೋಡಿ ನಮಗೂ ದುಃಖವಾಗುತ್ತದೆ. ಆದರೆ ಹೀಗೆ ಹಟಮಾರಿತನವನ್ನು ಮಾಡಿ

ಏನೂ ಲಾಭವಿಲ್ಲ. ನಿಮ್ಮಂಥ ನೂರಾರು ಹೆಂಗಸರು ಪಾಕೀಸ್ತಾನಕ್ಕೆ ಮರಳಿ ಹೋಗಿದ್ದಾರೆ.''

ಹತಾಶಳಾದ ಶಿವಾನಿ ತನ್ನ ಕಟ್ಟಕಡೆಯ ಅಸ್ತ್ರವನ್ನು ಪ್ರಯೋಗಿಸಿದಳು: "ನಾನು ಪಾಕೀಸ್ತಾನದಲ್ಲಿ ಒಬ್ಬ ಸೂಳೆಯ ಮಗಳಾಗಿದ್ದೆ! ಇಲ್ಲೋ, ಗರತಿಯಾಗಿ ಸುಖವಾಗಿ ಬಾಳಿಕೊಂಡಿದ್ದೇನೆ. ನಾನು ಪಾಕೀಸ್ತಾನಕ್ಕೆ ಮರಳಿ ಹೋದರೆ ಬೇರೇ ಮಾರ್ಗವಿಲ್ಲದೆ ಆ ಹೊಲಸು ಕಸುಬನ್ನೇ ಅವಲಂಬಿಸಬೇಕಾಗುತ್ತೆ! ಇದೇ ನಿಮ್ಮ ಇಷ್ಟವೇನು? ನೀವುಗಳು ಕೈಯಾರ ನನ್ನನ್ನು ಆ ನರಕಜೀವನಕ್ಕೆ ದೂಡುತ್ತಿದ್ದೀರಿ? ಇದು ಯಾವ ನ್ಯಾಯ? ಯಾವ ಧರ್ಮ?'' ಎಂದು ಕೇಳಿದಳು. ಈ ಮಾತುಗಳನ್ನಾಡುತ್ತಿದ್ದಂತೆ ಶಿವಾನಿಯು ಕೊರಲಸೆರೆ ಬಿಗಿದು ಬಂತು. ಕಣ್ಣೀರಿನ ದೊಡ್ಡ ದೊಡ್ಡ ಹನಿಗಳು ಆಣಿಮುತ್ತುಗಳಂತೆ ಅವಳ ನಯವಾದ ಕಪೋಲಗಳ ಮೇಲೆ ಜಗುಳಿ ಜಾರಿದುವು. ನಿರುಪಾಯನಾಗಿ ಸುರೇಶಚಂದ್ರ ತಲೆ ತಗ್ಗಿಸಿಕೊಂಡು ಅವಳ ಮಾತನ್ನು ಕೇಳುತ್ತಿದ್ದನು. ಅವನ ಕಣ್ಣುಗಳಲ್ಲಿಯೂ ಕಂಬನಿಗಳು ಕೋಡಿವರಿದವು. ಅವಳ ಧ್ವನಿ ಏನೋ ಒಂದು ಬಗೆಯ ಭೀಷಣ ಶಕ್ತಿಯಿಂದ ಕೂಡಿ ಅತಿ ಘೋರವಾದ ನಿರಾಶೆಯಿಂದ ತುಂಬಿದಂತಿತ್ತು.

ಆದರೆ ಅಧಿಕಾರಿಗಳೆದೆ ಕರಗಲಿಲ್ಲ. ಅವರು ಗಂಭೀರವಾಗಿ ಹೇಳಿದರು: "ತಾವು ಪಾಕೀಸ್ತಾನಕ್ಕೆ ಹೋದ ಮೇಲೆ ಏನು ಮಾಡುತ್ತೀರಿ? ಎಂಬುದು ನಮಗೆ ಅಪಕೃತ. ನಾವು ಹೇಳುವುದನ್ನೆಲ್ಲಾ ಮೊದಲೇ ಹೇಳಿದ್ದಾಗಿದೆ. ನೀವು ವ್ಯರ್ಥವಾಗಿ ಏಕೆ ಹಟಮಾಡುತ್ತಿದ್ದೀರಿ? ಭಾರತ ಸರ್ಕಾರದ ನೀತಿನಿಯಮಗಳು ನಿಮಗೆ ಗೊತ್ತಿರಬೇಕು? ಇನ್ನು ಹತ್ತು ನಿಮಿಷಗಳೊಳಗಾಗಿ ನೀವು ಇಲ್ಲಿಂದ ಹೊರಡಲೇಬೇಕು. ಹೆಚ್ಚು ಮಾತಾಡಿ ಏಕೆ ಕಂಠಶೋಷಣೆ ಮಾಡಿಕೊಳ್ಳುತ್ತೀರಿ?'' ಎಂದು ಖಡಾಖಂಡಿತವಾಗಿ ನುಡಿದರು.

ಶಿವಾನಿಯ ಹೃದಯ ಒಡೆದು ಸಾವಿರ ಚೂರಾಯಿತು. ಅವಳ ಕಣ್ಣಿಗೆ ಕತ್ತಲು ಕವಿದಂತಾಯಿತು. ಹಸಿಗೂಡಿದ ಕಣ್ಣಿನಿಂದ ಕ್ಷಣಕಾಲ

ತನ್ನ ಜೀವಿತೇಶ್ವರನನ್ನು ದಿಟ್ಟಿಸಿ ನೋಡಿದಳು. ಅವಳ ಸಜ್ಜಲ ನೀಲೋತ್ಪಲ ನಯನೋತ್ಪಲಗಳು ಶುಕ್ರ ನಕ್ಷತ್ರಗಳಂತೆ ಥಳಥಳಿಸುತ್ತಿದ್ದುವು. ಅವಳ ತನುಲತೆ ಕಂಪಿಸುತ್ತಿತ್ತು. ಹೇಗೋ ಕಷ್ಟಪಟ್ಟು ಇದ್ದಬದ್ದ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿಕೊಂಡು ಕ್ಷೀಣಸ್ವರದಲ್ಲಿ ಕೇಳಿಕೊಂಡಳು: "ಒಳ್ಳೆಯದು, ನಾನು ಕೆಲವು ಅವಶ್ಯಕವಾದ ಬಟ್ಟೆಬರೆಗಳನ್ನು ತೆಗೆದುಕೊಂಡು ಬರುತ್ತೇನೆ. ನನಗೆ ದಯವಿಟ್ಟು ಅರ್ಧ ಗಂಟೆ ಅವಕಾಶ ಕೊಡಿ."

ಅಧಿಕಾರಿಗಳು ಅನುಮತಿಸಿದರು. ಶಿವಾನಿ ಸರಸರನೆ ಮಗ್ಗಲು ಕೋಣೆಗೆ ಹೋದಳು. ಆದರೆ ಹೋದವಳು ಮುಕ್ಕಾಲು ಗಂಟೆಯಾದರೂ ಹೊರಗೆ ಬರಲಿಲ್ಲ. ಅಧಿಕಾರಿಗಳು ಸುರೇಶಚಂದ್ರನನ್ನೊಮ್ಮೆ ಸಂಶಯಪೂರ್ಣದೃಷ್ಟಿಯಿಂದ ನೋಡಿ, ಶಿವಾನಿಯನ್ನು ಹೊರಗೆ ಬರುವಂತೆ ಕೂಗಿದರು. ಮಾರುತ್ತರ ಬಾರದಿರಲು ಕೊಠಡಿಯನ್ನು ಪ್ರವೇಶಿಸಿದರು.

ಕೋಣೆಯೊಳಗೆ ಪಲ್ಲಂಕದ ಮೇಲೆ ಶಿವಾನಿ ನಿಸ್ತೇಜವಾಗಿ ಅಲುಗದೆ ಮಲಗಿದ್ದಳು. ಸುರೇಶಚಂದ್ರನ ಭಾವಚಿತ್ರವೊಂದನ್ನು ಬಲಗೈಯಿಂದ ಎದೆಗವಚಿಕೊಂಡಿದ್ದಳು. ಮತ್ತೊಂದು ಕೈಯಲ್ಲಿ ಎರಡು ಮಡಿಸಿದ ಚೀಟಿಗಳಿದ್ದವು. ಹತಭಾಗಿನಿಯಾದ ಶಿವಾನಿ ಕುಡಿದ ಕೂಡಲೇ ಪ್ರಾಣ ಹೋಗುವಂತಹ ತೀಕ್ಷ್ಣವಾದ ವಿಷವನ್ನು ಕುಡಿದು ಪ್ರಾಣಬಿಟ್ಟಿದ್ದಳೆಂದು ತಿಳಿಯಲು ಅಧಿಕಾರಿಗಳಿಗೆ ಬಹಳಹೊತ್ತು ಹಿಡಿಯಲಿಲ್ಲ. ಅವಳ ಕೈಯಲ್ಲಿದ್ದ ಕಾಗದಗಳನ್ನು ಬಿಚ್ಚಿ ನೋಡಿದರು. ಒಂದು ಕಾಗದವನ್ನು ಸ್ವಚ್ಛವಾದ ಹಿಂದಿಯಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿದ್ದಳು. ಅದರಲ್ಲಿ ಹೀಗಿತ್ತು:

"ಸುರೇಶಚಂದ್ರಬಾಬುಗಳನ್ನು ಬಿಟ್ಟುಹೋಗಲಾರದೆ ನಾನಾಗಿಯೇ ಆತ್ಮಹತ್ಯ ಮಾಡಿಕೊಂಡಿದ್ದೇನೆ. ಎಲ್ಲಿ ಜಾತಿ-ಮತಗಳ, ದೇಶ ವಿದೇಶಗಳ ಗೊಂದಲವಿರುವುದಿಲ್ಲವೋ ಅಲ್ಲಿಗೆ ಹೋಗುತ್ತಿದ್ದೇನೆ."

ಮತ್ತೊಂದು ತನ್ನ ಗಂಡನಿಗೆ ಬಂಗಾಳಿಯಲ್ಲಿ ಬರೆದ ಕಾಗದವಾಗಿತ್ತು:

"ಸುರೇಶಚಂದ್ರಮುಖರ್ಜಿಯವರಲ್ಲಿ ಅಂತಿಮ ಪ್ರಣಾಮಗಳು. ನಾನು ಎಲ್ಲಿ ಹೋಗುತ್ತೇನೋ ಅಲ್ಲಿ ಚಿರಂತನವೂ ನಿಮ್ಮ ಧ್ಯಾನಮಾಡುತ್ತ

ನಿಮ್ಮಾಗಮನವನ್ನು ಪ್ರತೀಕ್ಷಿಸುತ್ತಿರುತ್ತೇನೆ....ಆದರೆ ನೀವು ಈಗಲೇ ನನ್ನನ್ನು ಹಿಂಬಾಲಿಸುವುದು ಖಂಡಿತ ಬೇಡ. ಸ್ವಜಾತಿಯ ಅನುರೂಪ ಕನ್ಯೆಯೊಬ್ಬಳನ್ನು ಮದುವೆಯಾಗಿ ಸುಖವಾಗಿ ಬಾಳಿ. ನನ್ನ ಭಾಗ್ಯ ದಲ್ಲಿಲ್ಲದ ಇಹಲೋಕದ ಸುಖವನ್ನು ತಾವಾದರೂ ಪೂರ್ಣವಾಗಿ ಅನುಭವಿಸಿ. ಶಿವಶಂಕರನು ನಿಮಗೆ ಶಿವ(ಮಂಗಳ)ವನ್ನುಂಟುಮಾಡಲಿ.''

—ನಿಮ್ಮ ಶಿವಾನಿ

ಅಧಿಕಾರಿಗಳು ವಿಷಣ್ಣರಾಗಿ ಹೊರಟುಹೋದರು. ಸುರೇಶಚಂದ್ರ ಶಿವಾನಿಯ ಮೃತದೇಹದ ಮೇಲೆ ಬಿದ್ದು ''ಶಿವಾನೀ, ಶಿವಾನೀ'' ಎಂದು ಚೀತ್ಕಾರ ಮಾಡಲಾರಂಭಿಸಿದನು. ಮನೆಯಲ್ಲೆಲ್ಲಾ 'ಶಿವಾನಿ' ಎಂಬ ಕೂಗು ಪ್ರತಿಧ್ವನಿಸಿತು.

ನಿನ್ನೆತಾನೇ ನಗುತ್ತಾ, ಕೆಲೆಯುತ್ತಾ ವಸಂತಮಾಸದಲ್ಲಿ ಹೂಬಿಟ್ಟ ವನದಂತೆ ಕಂಗೊಳಿಸುತ್ತಿದ್ದ ಶಿವಾನಿ ಸತ್ತಳೆಂದು ನಂಬುವುದೇ ಕಷ್ಟ ವಾಯಿತು. ಒಂದೇ ದಿನದಲ್ಲಿ ಅವನು ಮುದುಕನಾಗಿಬಿಟ್ಟಂತೆ ತೋರು ತ್ತಿತ್ತು. ಅವನ ಮುಖ ಪ್ರೇತಕಳೆಯನ್ನು ಬೀರುತ್ತಿತ್ತು.

ಶಿವಾನಿಯ ರಂಗಳಿದ ತುಟಿಯಮೇಲೆ ಹೂಮುತ್ತನ್ನೊತ್ತುತ್ತಾ ಸುರೇಶನು ''ಶಿವಾನೀ, ನಿನ್ನ ಮಾತಿನಂತೆಯೇ ಆಗಲಿ. ನಾನೀಗಲೇ ನಿನ್ನನ್ನು ಹಿಂಬಾಲಿಸುವುದಿಲ್ಲ. ಆದರೆ ಮತ್ತೆ ಮದುವೆಯಾಗಿ ನಿನ್ನ ಪುಣ್ಯಸ್ಮೃತಿಗೆ ದ್ರೋಹ ಮಾಡುತ್ತೇನೆಂದು ತಿಳಿದೆಯಾ? ಇಲ್ಲ, ಶಿವಾನಿ. ನಾನು ಬದುಕಿರುವಷ್ಟು ದಿನವೂ ಪರಲೋಕದಲ್ಲಾದರೂ ನಿನ್ನನ್ನು ಪಡೆಯುವಂತಾಗಲೆಂದು ಪ್ರಾರ್ಥಿಸುತ್ತೇನೆ'' ಎಂದು ಪ್ರಲಾಪಿಸುತ್ತಾ ವಿವರ್ಣವಾದ ಶಿವಾನಿಯ ದೇಹವನ್ನು ನೋಡಲಾರದೆ ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡನು.

ಈ ದುರಂತವನ್ನು ನೋಡಿ ಸಹಿಸಲಾರದೆಯೋ ಎಂಬಂತೆ ಕಿಟಕಿಯ ಬಳಿ ಅರಳಿ ನಳನಳಿಸುತ್ತಿದ್ದ ಗುಲಾಬಿಯ ಹೂವು ತೊಟ್ಟು ಕಳಚಿ ಕೆಳಗೆ ಬಿತ್ತು. ಸೀಬೆಯ ಗಿಡದಲ್ಲಿ ಕುಳಿತು ರಾಗಸುಧೆಯನ್ನು ಸುರಿಸುತ್ತಿದ್ದ ಕಾಡುಹಕ್ಕಿ ತನ್ನ ಹಾಡನ್ನು ಹಠಾತ್ತಾಗಿ ನಿಲ್ಲಿಸಿಬಿಟ್ಟಿತು. ಭಾಸ್ಕರನು ಮೋಡಗಳ ತೆರೆಯಲ್ಲಿ ಮರೆಯಾಗಿ ಹೋದನು.

# ಅಂದು ಕೊಟ್ಟಿದ್ದರೆ?

ಸಂಜೆ ಐದು–ಐದೂವರೆ ಗಂಟೆಯ ಸಮಯ. ಆಫೀಸು ಮುಗಿಯುತ್ತಲೇ ಸೀದಾ ಮಾರ್ಕೆಟ್‌ಗೆ ಹೋಗಿ ಮನೆಗೆ ಬರುತ್ತಿದ್ದೆ. ಮನೆಯಿಂದ ಬರುವಾಗ, ನನ್ನ ಮೂರು ವರ್ಷದ ಮುದ್ದು ಮಗಳು ಕುಸುಮಾ ಕಿತ್ತಲೆಯ ಹಣ್ಣು ತರುವಂತೆ ಹೇಳಿದ್ದಳು. ಅಂದು ಮಾರ್ಕೆಟ್‌ನಲ್ಲಿ ಕಿತ್ತಳೆಯ ಹಣ್ಣು ತುಂಬಾ ದುಬಾರಿಯಾಗಿತ್ತು. ಆದರೆ ನನ್ನ ಪ್ರೀತಿಯ ಮಗುವಿಗೋಸ್ಕರ ತಾನೇ ಖರ್ಚು ಮಾಡುವುದು? ಅಂದುಕೊಂಡು ಹೇಳಿದ ಬೆಲೆ ಕೊಟ್ಟು ಒಂದು ಡಜನ್ ಕಿತ್ತಳೆಯ ಹಣ್ಣನ್ನೂ, ಒಂದಾರು ಸೇಬಿನ ಹಣ್ಣುಗಳನ್ನೂ, ಒಂದು ಪ್ಯಾಕೆಟ್ ಬಿಸ್ಕತ್ತನ್ನೂ ಕೊಂಡುಕೊಂಡೆ.

ಬರುತ್ತಿರುವಾಗ ನನ್ನ ಮನಸ್ಸಿನಲ್ಲಿ ಪ್ರತಿ ಕ್ಷಣದಲ್ಲೂ ನನ್ನ ಬರವನ್ನೇ ಎದುರುನೋಡುತ್ತಾ, ಉತ್ಕಂಠಿತೆಯಾಗಿ ಕಾಯುತ್ತಾ, ಬಾಗಿಲ ಬಳಿಯಲ್ಲೇ ನನ್ನನ್ನು ಎದುರುಗೊಳ್ಳಲು ಸಿದ್ಧಳಾಗಿರುವ ನನ್ನ ನಲ್ಲೆ ರತ್ನ, ಅಣ್ಣ ಕಿತ್ತಳೆಯ ಹಣ್ಣು ತರುತ್ತಾನೆಂದು ಕಾಯುತ್ತಿರುವ ನಮ್ಮ ಪ್ರೇಮದ ಪುತ್ಥಳಿ ಕುಸುಮಳ ಚಿತ್ರಗಳು ತುಂಬಿಹೋಗಿದ್ದುವು. ಇವತ್ತು ಮನೆಗೆ ಬರುವುದು ತಡವಾಯಿತೆಂದು ಖಂಡಿತ ರತ್ನ ಕೋಪವಾಗಿರುತ್ತಾಳೆ. ತನ್ನನ್ನು ಕಂಡೊಡನೆಯೇ ಕೋಪ ಎಲ್ಲೋ ಮಾಯವಾಗಿಬಿಡುತ್ತದೆ. ಆದರೂ ನಸುಮುನಿಸಿನ ಸುಳ್ಳುಸೋಗು ಹಾಕಿಕೊಂಡಿರುತ್ತಾಳೆ. ಕಳ್ಳ ಕೋಪದ ಮರೆಯಿಂದ ನಸುನಗೆ ಇಣಿಕಿನೋಡುತ್ತದೆ······ಬಿಂಕದಿಂದ ಮಾತಾಡುವುದಿಲ್ಲ. 'ಎಲ್ಲಿ ರತ್ನ, ಹೀಗ್ಗಿರುಗು. ಹಾಗಲ್ಲ, ಕೋಪ ಮಾಡಿಕೊಳ್ಳೋದು. ಎಲ್ಲಿ ಮೊದಲಿಂದ ಕೋಪ ಮಾಡಿಕೋ ನೋಡೋಣ' ಎನ್ನುತ್ತೇನೆ. ಅವಳ ಪ್ರಯತ್ನವನ್ನು ಮೀರಿ, ಬಿಗಿದ ತುಟಿಗಳನ್ನು ಬಿರುಕಿಸಿಕೊಂಡು ನಗು ಬಂದುಬಿಡುತ್ತದೆ. ಅಣ್ಣ ಬಂದನೆಂದು ಕುಣಿದಾಡುವ ನನ್ನ ಕುಸುಮಾ······ಹಣ್ಣು ಕಂಡು ಅರಳಿದ ಚೆಲುಮೊಗ ······ಅವಳ ಚೆಲ್ಲೆಗಂಗಳಲ್ಲಿ ಮಿನುಗುವ ತುಂಟ ನಗು. ಅವಳೊಮ್ಮೆ ನಕ್ಕರೆ ತುಂಬು ತಿಂಗಳ ಬೆಳ್ಳಿಬೆಳಕು ಚೆಲ್ಲಿದಂತಾಗುತ್ತದೆ. ನಕ್ಕಾಗ ಅವಳ

ಮುದ್ದಾದ ಎರಡು ತುಂಬು ಕೆನ್ನೆಗಳಲ್ಲೂ ಚೆಲುವಾದ ಚೆಂಗುಲಾಬಿಗಳು ಅರಳುತ್ತವೆ. ಹೀಗೇ ಸುಖವಾದ ಯೋಚನೆಯಲ್ಲಿ ಮೈಮರೆತು ಬರುತ್ತಿದ್ದೆ.

ಬಸ್‌ಸ್ಟ್ಯಾಂಡ್ ಹತ್ತಿರ ಬರುತ್ತಿದ್ದಾಗ ನನ್ನೆದುರಾಗಿ ಬರುತ್ತಿದ್ದ ಒಬ್ಬ ತಿರುಕಿಯ ಕರುಣಾಜನಕವಾದ ಮಧುರವಾದ ಹಾಡು ನನ್ನನ್ನು ಎಚ್ಚರಿಸಿತು. ನನ್ನನ್ನು ಕಂಡೊಡನೆ ಹಾಡನ್ನು ನಿಲ್ಲಿಸಿ, ಆರ್ತಸ್ವರದಿಂದ ಏನಾದರೂ ಕೊಡುವಂತೆ ನನ್ನನ್ನು ಬೇಡಿದಳು. ನಡು ವಯಸ್ಸಿನ ಹೆಂಗಸು, ಕೃಶವಾದ ದೇಹ, ಕಂಗೆಟ್ಟ ಮುಖ, ಗುಳಿಬಿದ್ದ ಕಣ್ಣುಗಳು, ಜಡೆಗಟ್ಟಿದ ತಲೆಗೂದಲು, ಮಾಸಿದ ಚಿಂದಿ ಸೀರೆ. ಅವಳ ಮಡಲಿನಲ್ಲಿ ಹಸಿವಿನಿಂದ ಚೀರುತ್ತಿದ್ದ, ರೋಗದಿಂದ ನರಳುತ್ತಿದ್ದ ಒಂದು ಮುದ್ದಾದ ಮಗು. ಕೊಂಚ ಕಪ್ಪಾಗಿದ್ದರೂ, ರೋಗ ದಾರಿದ್ರ್ಯಗಳಿಂದ ಕಂಗಾಲಾಗಿದ್ದರೂ ಒಳ್ಳೇ ಮಾಟವಾಗಿ ಮುದ್ದಾಗಿತ್ತು. ನಾನು ಸಮುಕಲು ಕಾಲಾಣೆಯೇನಾದರೂ ಇದೆಯೇನೋ ಅಂತ ಜೇಬಿಗೆ ಕೈಹಾಕಿದೆ. ಬಿಡಿಗಾಸು, ಕಾಲಾಣೆಗಳಾವುವೂ ಇರಲಿಲ್ಲ. ಎಲ್ಲಾ ರೂಪಾಯಿ, ಆಣೆಗಳೇ. 'ಚಿಲ್ಲರೆ ಇಲ್ಲ, ಹೋಗ್ಹೋಗು' ಎಂದೆ. ಅವಳು ಮತ್ತೆ ಮತ್ತೆ ಬೇಡಿದಳು. "ಬುದ್ಧೀ ಏನಾದರೂ ಕೊಡಿ. ಮಗೂ ಹೊಟ್ಟೆಗಿಲ್ದೆ ಸಾಯ್ತಾ ಇದೆ. ನನ್ಮಗೂ ಜೀವಾ ಉಳಿಸ್ಕೊಟ್ಟ ಪುಣ್ಯಾ ಬರುತ್ತೆ" ಎಂದು ಹಲವು ತೆರದಲ್ಲಿ ಅಂಗಲಾಚಿ ಬೇಡಿದಳು. ಕಂಗಳಿಂದ ನೀರೊಸರುತ್ತಿತ್ತು. ಹಸಿವಿನಿಂದ ಕಂಗೆಟ್ಟ ಮಗು ಹೆಚ್ಚು ಕಡಮೆ ಅದೂ ನನ್ನ ಕುಸುಮಳ ಓರಗೆಯದೇ— ಹಣ್ಣು ಕಂಡು ಆಸೆ ತುಂಬಿದ ಕಂಗಳಿಂದ ನನ್ನ ನೆಟ್‌ಬ್ಯಾಗನ್ನೇ ನೋಡುತ್ತಾ ತನಗೆ ಹಣ್ಣು ಬೇಕೆಂದು ಹಟ ಹಿಡಿದಿತ್ತು. ನಾನು ಮುಂದಕ್ಕೆ ಹೋಗು, ಚಿಲ್ಲರೆ ಇಲ್ಲ ಎಂದು ಎಷ್ಟು ಗದರಿಕೊಂಡರೂ ಅವಳು ಬಿಡಲಿಲ್ಲ. ಕಿಲುಬುಗಟ್ಟಿದ ಬಿಡಿಗಾಸೋ, ಮೂರು ಕಾಸಿನ ಬಿಲ್ಲೆಯೋ ಇದ್ದಿದ್ದರೆ ಅವಳೊಡನೆ ಹೆಚ್ಚು ವಾದಿಸದೆ, 'ತೊಲಗಾಚೆ' ಎಂದು ಬಿಸಾಡಿಬಿಡುತ್ತಿದ್ದೆ. ಆದರೆ ಒಂದಾಣೆ, ಎರಡಾಣೆಗಳನ್ನು ಅವಳಿಗೆ ಕೊಡುವುದಕ್ಕೆ ನನಗೆ ಮನಸ್ಸಿರಲಿಲ್ಲ. ಅವಳ ಮೊಂಡಾಟದಿಂದ ರೇಗಿಹೋಗಿ, "ಏ, ತೊಲಗಾಚೆ, ಎಷ್ಟ್ಸಾರಿ ನಿನಗೆ ಹೇಳೋದು? ನಾಚ್ಗೇ ಆಗೋಲ್ವಾ? ಎಲ್ಲಾದರೂ ಕೂಲೀ ಮಾಡೋಗು" ಎಂದೆ. ಆ ಭಿಕ್ಷುಕಿ ಕಡು ದೈನ್ಯದಿಂದ ಕಲ್ಲುಕರಗಿಸುವ ದನಿಯಲ್ಲಿ ಆಡಿದಳು—

"ಹೊಟ್ಟೇ—ನನ್ಮಕ್ಳೆಳ್ಕ ನನ್ಮಗೂಗೋಸ್ಕ, ಆದ್ರ ಹೊಟ್ಟೆಗಿಲ್ದ ಸಂಕ್ಟ ನೋಡ್ಲಾರ್ದಕ್ಕೆ ನಾಚ್ಗೀ ಬಿಟ್ಟು ಬೇಡ್ತಿನ್ನೀ ಸಾಮಿ. ಏನಾದ್ರು ಕೊಡೀ ಬುದ್ಧಿ. ಹೊಟ್ಗಲ್ದೆ ಸಾಯ್ತಾ ಇದೆ—" ನನ್ನ ಕಲ್ಲೆದೆ ಕರಗಲಿಲ್ಲ. ಎಷ್ಟು ಹೊತ್ತು ಇವಳೊಡನೆ ವಾದಿಸುತ್ತಾ ನಿಂತಿರುವುದು? ಎಂದುಕೊಂಡು ಅಡ್ಡಗಟ್ಟಿ ನಿಂತಿದ್ದ ಅವಳನ್ನು ಕೊಸರಿಕೊಂಡು ಮುಂದಕ್ಕೆ ಹೊರಟೆ.

ಸ್ವಲ್ಪ ಹೊತ್ತಿನ ಮೇಲೆ ಆ ತಿರುಕಿಯನ್ನೂ ಅವಳ ಮಗುವನ್ನೂ ನೆನೆದುಕೊಂಡು, "ಅಯ್ಯೋ ಪಾಪ! ಒಂದಾಣೆ ಕೊಟ್ಟಿದ್ದರಾಗಿತ್ತು. ಆ ಮಗೂಗೆ ಒಂದು ಹಣ್ಣು ಕೊಡಬೇಕಾಗಿತ್ತು" ಎಂದು ಪಶ್ಚಾತ್ತಾಪ ಪಟ್ಟುಕೊಂಡೆ. ಅನಂತರ ನನಗೆ ನಾನೇ, "ಅಯ್ಯೋ, ನಾನೆಂಥ ಹುಚ್ಚ. ಹೀಗೆ ಬರೋರು ಎಷ್ಟು ಜನವೋ? ದಿನಕ್ಕೆ ಸಾವಿರ ಜನ ಬರ್ತಾರೆ. ಲೋಕದ ದಾರಿದ್ರ್ಯನೆಲ್ಲಾ ನಾನು ನಿರ್ಮೂಲ ಮಾಡೋಕಾಗುತ್ಯೇ? ಅವರವರ ಕರ್ಮ! ಅನುಭವಿಸುತ್ತಾರೆ" ಎಂದು ಸಮಾಧಾನಪಟ್ಟು ಕೊಂಡೆ. ಮನೆಗೆ ಹೋದ ಮೇಲೆ ಕುಸುಮುಳ ಆಟಪಾಟಗಳಲ್ಲಿ, ಕುಣಿ ದಾಟದಲ್ಲಿ ಸಂಪೂರ್ಣವಾಗಿ ಆ ತಿರುಕಿಯನ್ನೂ, ಅವಳ ಮಗುವನ್ನೂ ಮರೆತುಬಿಟ್ಟೆ.

* * *

ಮರುದಿನ ಬೆಳಿಗ್ಗೆ ಬೈಸ್ಕಲ್ ಮೇಲೆ ಆಫೀಸಿಗೆ ಹೋಗುತ್ತಿದ್ದೆ. ದಾರಿ ಯಲ್ಲಿ ಒಬ್ಬ ಹೆಂಗಸು ಸತ್ತ ಮಗುವೊಂದನ್ನು ಎದೆಗವಚಿಕೊಂಡು ಅಳುತ್ತಾ, ಗೋಳಾಡುತ್ತಾ, ಜಡೆಗಟ್ಟಿದ ಕೂದಲನ್ನು ಕಿತ್ತುಕೊಳ್ಳುತ್ತಾ, ಎದೆ ಎದೆ ಬಡಿದುಕೊಳ್ಳುತ್ತಾ ಹೋಗುತ್ತಿದ್ದಳು. ಅವಳ ಮೈಯೆಲ್ಲಾ ಧೂಳಿಧೂಸ ರಿತವಾಗಿತ್ತು. ಮುಖವೋ, ಹೆಣದ ಮುಖವಾದರೂ ವಾಸಿ. ಹಿಂದಿನ ದಿನ ಮಾರ್ಕೆಟ್ ಚೌಕದ ಬಳಿ ನನ್ನನ್ನು ಬೇಡಿ ನಿರಾಕೃತಳಾದ ಭಿಕ್ಷುಕಿಯೇ ಅವಳು! ಈ ಒಂದೇ ದಿನದಲ್ಲಿ—ಒಂದು ದಿನವೂ ಇಲ್ಲ—ಇಷ್ಟು ಅಲ್ಪಾವಧಿ ಯಲ್ಲಿ ನಿನ್ನೆಗಿಂತ ಹತ್ತುವರ್ಷ ಹೆಚ್ಚು ವಯಸ್ಸಾದವಳಂತೆ ಕಂಡಳು. ಅಯ್ಯೋ ಪಾಪ! ಎಂದುಕೊಂಡು ಮುಂದಕ್ಕೆ ಹೊರಟುಹೋದೆನು. ಆಫೀಸಿಗೆ ಹೊತ್ತಾಗಿದ್ದರಿಂದ ಅಲ್ಲಿ ಹೆಚ್ಚು ಹೊತ್ತು ನಿಲ್ಲಲು ಆಗಲಿಲ್ಲ.

* * *

ಬೀದಿಯ ಕಡೆಯ ರೂಮಿನಲ್ಲಿ ಕಿಟಕಿಯ ಬಳಿ ಬಂದು ಕುರ್ಚಿಯ ಮೇಲೆ ಕುಳಿತು ರತ್ನ ಏನೋ ಕ್ರೋಚಾದ ಕೆಲಸ ಮಾಡುತ್ತಿದ್ದಳು. ಅವಳ ಹಿಂದೆ ನಿಂತು ನಡು ನಡುವೆ ಅವಳೊಡನೆ ಮಾತನಾಡುತ್ತಾ, ನಾನು ಮನೆಯ ಮುಂದಿನ ರಸ್ತೆಯಲ್ಲಿ ಚೆಂಡಾಟವಾಡುತ್ತಿದ್ದ ಕುಸುಮಳನ್ನೇ ನೋಡುತ್ತಿದ್ದೆ. ಅಂದೇ ಹೊಲಿಸಿಕೊಂಡು ಬಂದಿದ್ದ ಅಚ್ಚ ನೀಲಿಬಣ್ಣದ ಮಖಮಲ್ ಲಂಗವನ್ನು ತೊಟ್ಟಿದ್ದಳು. ಆ ನೀಲಿಯ ಮಖಮಲ್ ಬಟ್ಟೆಗೂ, ಅವಳ ಮೈಯ ಎಳಗೆಂಪಿನ ಮೇಲಿನ ಬೆಳ್ವಣ್ಣಕ್ಕೂ ಎಷ್ಟು ಚೆನ್ನಾಗಿ ಒಪ್ಪುತ್ತದೆ? ಆ ಸಂಜೆಯ ಹೊಂಬೆಳಕಿನಲ್ಲಿ ಆ ಲಂಗ ಹೇಗೆ ಮಿರುಮಿರನೆ ಮಿಂಚುತ್ತಿದೆ? ಎರಡೂ ಭುಜಗಳ ಮೇಲೆ ಎರಡು ಜಡೆಗಳು ಅತ್ತಲಿಂದಿತ್ತ, ಇತ್ತಲಿಂದತ್ತ ಹೇಗೆ ಒಲಿದಾಡುತ್ತಿವೆ? ಮುಡಿಯಲ್ಲಿ ಎರಡು ಚೆಂಗುಲಾಬಿಗಳೊಪ್ಪಿವೆ. ಆ ಸಂಜೆಯ ಕೆಂಬೆಳಕಿನಲ್ಲಿ ನನ್ನ ಕುಸುಮಾ ಎನಿತು ಕಮನೀಯವಾಗಿ ಕಂಗೊಳಿಸುತ್ತಿದ್ದಾಳೆ! ಅವಳ ಮುದ್ದಾದ ಹಣೆಯ ಮೇಲೆ ಕರಿಯ ಕುರುಳೋಳಿ ಅದೆಷ್ಟು ಬೆಡಗಿನಿಂದ ನಾಟ್ಯವಾಡುತ್ತಿದೆ? ಅವಳ ಲೋಲಾಕಿನ ಕೆಂಪು ಹರಳುಗಳು ಹೇಗೆ ಲಕಲಕಿಸುತ್ತಿವೆ?— ಅವಳಿಗೆ ಇನ್ನೂ ಆಡುವುದಕ್ಕೆ ಬರದು. ಚೆಂಡು ಒಂದೆರಡು ಪುಟ ಹೊಡೆಯುತ್ತಲೇ ಕೈತಪ್ಪಿ ಎಲ್ಲಿಲ್ಲೋ ಓಡಿಹೋಗುತ್ತದೆ. ಓಡಿಹೋಗಿ ಅದನ್ನು ತಂದು ಮತ್ತೆ ಮತ್ತೆ ಆಡುತ್ತಿದ್ದಳು.

ನಾನವಳನ್ನೇ ನೋಡುತ್ತಾ ನೋಡುತ್ತಾ ಮುಗ್ಧನಾಗಿಬಿಟ್ಟಿದ್ದೆ. ನಡುವೆ ಒಮ್ಮೆ ರತ್ನಳ ಕಡೆ ತಿರುಗಿದೆ. ಅವಳೂ ತನ್ನ ಹೆಣಿಗೆಯ ಕೆಲಸವನ್ನೂ ನಿಲ್ಲಿಸಿ ಕುಸುಮಳನ್ನೇ ನೋಡುತ್ತಿದ್ದಳು. "ಕುಸುಮಾ, ಕುಸುಮಾ ಒಳಗೆ ಬಾ, ಒಳಗೇ ಆಡಿಕೊಳ್ಳುವೆಯಂತೆ" ಎಂದು ಕೂಗಿದಳು. ಆದರೆ ಆಟದಲ್ಲಿ ಮೈಮರೆತಿದ್ದ ಕುಸುಮಳ ಕಿವಿಗೆ ಅದೆಲ್ಲಿ ಬೀಳುವುದು? "ಕುಸುಮಾ, ಒಳಗೆ ಬಾಮ್ಮಾ ನನ್ನ ಚಿನ್ನ. ಬೀದಿಯಲ್ಲಾಡಿ ಮೈಯೆಲ್ಲಾ ಮಣ್ಣು ಮಾಡ್ಕೊಳ್ತೀ. ಹೊಸ ಲಂಗಾ ಕೊಳೇ ಮಾಡಿಕೊಳ್ತೀ" ಎಂದು ಮತ್ತೆ ಗಟ್ಟಿಯಾಗಿ ಕೂಗಿದಳು. ಅವಳು ಕತ್ತೆತ್ತಿ ನಮ್ಮ ಕಡೆ ನೋಡಿ, ಮುದ್ದಾದ ತನ್ನ ಪುಟ್ಟ ಪುಟ್ಟ ಕೈಬೆರಳುಗಳಿಂದ ಮುಂಗುರಳನ್ನೋಸರಿಸುತ್ತಾ, ಕುಲು ಕುಲು ನಗುತ್ತಾ ನುಡಿದಳು—"ಇಲ್ಲಾಮ್ಮಾ, ಇನ್ನು

ಚಪ್ಪ ಹೊತ್ತು, ಆಮೇಲೆ ಒಳಗ್ಬತ್ತೀನಿ.'' ಅವಳ ತೊದಲ್ನುಡಿಗಳು ನನ್ನ ಕಿವಿಗಳಿಗೆ ಎನಿತು ಇನಿದಾಗಿ ಕೇಳಿಸಿತು! ಅದೊಂದು ವಿಧವಾದ ಸುಖ ಭಾವಾಪನ್ನನಾಗಿ ಹಾಗೆಯೇ ನಿಂತಿದ್ದೆ........ಬಣ್ಣನೆಗೆ ಸಿಲುಕದ ಅನುಭವ ಸುಖವದು.

ಇದ್ದಕ್ಕಿದ್ದ ಹಾಗೆ—ಏನಾಗಿಹೋಯಿತು? ಕುಸುಮಾ ಚೆಂಡನ್ನು ಪುಟ ಹೊಡೆಯುತ್ತಿರುವಾಗ ನಡುವೆ ಕೈತಪ್ಪಿ ರಸ್ತೆಯ ಮಧ್ಯದಲ್ಲಿ ಉರುಳಿ ಹೋಯಿತು. ಅದೇ ಸಮಯದಲ್ಲಿ ಮೋಟಾರು ಕಾರೊಂದು ನಮ್ಮ ಮನೆಯ ಮುಂದೆ ರಭಸವಾಗಿ ಹಾದುಹೋಗುತ್ತಿತ್ತು. ಅದರ ಅರಿವಿಲ್ಲದೆ ಕುಸುಮಾ ಚೆಂಡನ್ನು ತೆಗೆದುಕೊಳ್ಳಲು ಓಡಿದಳು. ಆ ದೃಶ್ಯವನ್ನು ಕಂಡು ರತ್ನ ''ಅಯ್ಯೋ! ಕುಸುಮಾ ಎಂದು ಕೂಗಿಕೊಂಡು ಹಿಂದಕ್ಕೆ ಬಿದ್ದು ಬಿಟ್ಟಳು. ನಮಗಾರಿಗೂ ಓಡಿಹೋಗಿ ಅವಳನ್ನುಳಿಸಲು ಅವಕಾಶವಿರಲಿಲ್ಲ. ನನ್ನ ಜೀವದೊಳಗಿನ ಜೀವ, ನನ್ನ ಒಬ್ಬಳೇ ಒಬ್ಬ ಮಗಳು, ನನ್ನ ಮುದ್ದು ಕುಸುಮಾ ಪ್ರಾಣಾಪಾಯಕ್ಕೀಡಾಗಿದ್ದಾಳೆ. ನನ್ನ ತಲೆ ಗಿರಗಿರನೆ ತಿರುಗಲಾರಂಭಿಸಿತು. ಕೆಳಗಿನ ನೆಲ, ತಾರಸಿ, ಸುತ್ತುಮುತ್ತಲಿನ ಗೋಡೆ ಗಳು ಎಲ್ಲವೂ ಗಿರಗಿರನೆ ತಿರುಗಿದ್ದಂತೆ ತೋರಿತು. ಕುಸುಮಾ ಎಂದು ಆರ್ತಸ್ವರದಲ್ಲಿ ಚೀರಿ ಕುಸಿದುಬಿದ್ದೆನು. ಸ್ವಲ್ಪಹೊತ್ತಿನಲ್ಲೇ ಎದ್ದು ಉದ್ವಿಗ್ನನಾಗಿ ಬೀದಿಯ ಕಡೆಗೋಡಿದೆನು. ಮೋಟಾರು ಹೊರಟುಹೋಗಿತ್ತು. ಬೀದಿಹೋಕ ಭಿಕ್ಷುಕಿಯೊಬ್ಬಳು ನನ್ನ ಮಗುವನ್ನೆತ್ತಿಕೊಂಡು, ಎದೆಗವಚಿ ಕೊಂಡು, ಲಂಗಕ್ಕೆ ಹತ್ತಿದ ಧೂಳನ್ನು ಕೆಡುವುತ್ತಾ, ಬಾರಿಬಾರಿಗೂ ಅವಳ ಕೆನ್ನೆ, ತುಟಿ, ಹಣೆಗಳಿಗೆ ಮುತ್ತಿಡುತ್ತಿದ್ದಳು. ಅವಳೇ, ಜೀವದ ಪರಿವೆಯಿಲ್ಲದೆ ಮುನ್ನುಗ್ಗಿ ಮೃತ್ಯುವಿನ ದವಡೆಯಲ್ಲಿದ್ದ ನನ್ನ ಕುಸುಮಳನ್ನು ರಕ್ಷಿಸಿದ್ದಳು. ಅವಳ ದೇಹದಲ್ಲಿ ಹಲವು ಗಾಯಗಳಾಗಿ ಧಾರಾಕಾರವಾಗಿ ರಕ್ತ ಸೋರುತ್ತಿತ್ತು. ಅವಳಿಗೆ ಅದರ ಪರಿವೆಯೇ ಇರಲಿಲ್ಲ. ಕುಸುಮಳಿಗೆ ಮಾತ್ರ ಸ್ವಲ್ಪವೂ ಪೆಟ್ಟಾಗಿರಲಿಲ್ಲ. ಮೊಣಕೈ ಮತ್ತು ಮಂಡಿಗಳ ಬಳಿ ಸ್ವಲ್ಪ ತರಚಿದಂತಾಗಿತ್ತು, ಅಷ್ಟೆ. ಆಗ ನನಗಾದ ಸಂತೋಷವನ್ನು ಹೇಳತೀರದು. ಆ ತಿರುಕಿಯನ್ನು ಕಂಡು ಕೃತಜ್ಞತೆ ಉಕ್ಕಿಬಂತು. ಹೃದಯ ತುಂಬಿಬಂತು. ಕಣ್ಣುಗಳು ಹನಿಯಾಡಿದುವು. ಒಂದು ತಿಂಗಳ ಹಿಂದೆ ಮಾರ್ಕೆಟ್ ಚೌಕದ ಬಳಿ ಕಂಡಿದ್ದ ತಿರುಕಿಯೇ ಇವಳು! ಮರು

ದಿನವೇ ಅವಳ ಮಗು ಸತ್ತುಹೋದುದು— ಎಲ್ಲಾ ತಟ್ಟನೆ ನೆನಪಾಯಿತು. ಅಂದು ನಡೆದುದೆಲ್ಲಾ ಕಣ್ಣಿಗೆ ಕಟ್ಟಿದಂತಾಯಿತು.

ನನ್ನನ್ನು ಕಂಡೊಡನೆ ಮಗುವನ್ನು ಕೆಳಗಿಳಿಸಿ ದೂರ ಸರಿದು ನಿಂತಳು. 'ಏಕಮ್ಮಾ, ದೂರ ಸರಿಯುತ್ತೀ? ಮನೆಯೊಳಕ್ಕೆ ಬಾಮ್ಮಾ' ಎಂದು ನಾಚಿಕೆಯಿಂದಲೂ, ಕೃತಜ್ಞತೆಯಿಂದಲೂ ಕರೆದೆ. ಅಷ್ಟರಲ್ಲಿ ಅಲ್ಲಿಗೆ ಬಂದಿಪ್ಪ ರತ್ನಳೂ, "ಒಳಗೆ ಬಾಮ್ಮಾ, ಬಾ ತಾಯಿ, ನಮ್ಮಗೂ ಜೀವಾ ಉಳಿಸಿಕೊಟ್ಟ ನಿನಗೆ ಏನು ಕೊಟ್ಟರೆತಾನೇ ನಿನ್ನ ಋಣ ತೀರೀತು?" ಎಂದು ಕಂಬನಿದುಂಬಿ ಅವಳನ್ನು ಕರೆದಳು. ಅವಳು ಒಳಗೆ ಬರಲೊಪ್ಪದೆ, ಹೋಗತೊಡಗಿದಳು. ನಾನು ನನ್ನ ಜೇಬಿಗೆ ಕೈಹಾಕಿ, ಕೈಗೆ ಬಂದಷ್ಟು ನೋಟುಗಳನ್ನು ತೆಗೆದು— ಸುಮಾರು ನೂರೈವತ್ತು ಇನ್ನೂರು ರೂಪಾಯಿಗಳ ಮೇಲೆಯೇ ಇದ್ದುವು— ಅವಳಿಗೆ ಕೊಡಹೋದೆ. ಆಗ ಅವಳಿಗೆ ನನ್ನಲ್ಲಿದ್ದುದು ಏನು ಬೇಕಾದರೂ ಕೊಡಲು ಸಿದ್ಧವಾಗಿದ್ದೆ. ನನ್ನ ಮುಖವನ್ನು ತಿರಸ್ಕಾರದಿಂದೊಮ್ಮೆ ನೋಡಿದಳು. ಬಹುಶಃ ಅಂದು ಮಡಿದ ತನ್ನ ಕಂದನ ನೆನಪಾಯ್ತೇನೋ? ಕೈಗಳಿಂದ ಮುಖವನ್ನು ಮುಚ್ಚಿಕೊಂಡು, "ನನ್ಕೆಲ್ಲಾಸ್ತು. ನಾ ಹೋಯ್ತೀನಿ. ನಂಗೇನೂ ಬೇಡ, ಬುಡಿ......" ಎಂದು ಹೇಳಿ, ನಾವೆಷ್ಟು ಕೇಳಿಕೊಂಡರೂ ಏನನ್ನೂ ತೆಗೆದುಕೊಳ್ಳದೆ ಹಾಗೆಯೇ ಹೊರಟುಹೋದಳು.

ಮನೆಯೊಳಕ್ಕೆ ಬಂದು ಕುರ್ಚಿಯ ಮೇಲೆ ಕುಳಿತುಕೊಂಡು ಚಿಂತಿಸತೊಡಗಿದೆ. ಅಂದೇ ಕೊಟ್ಟಿದ್ದರೆ—ಬರೇ ಒಂದಾಣೆ, ಒಂದೆರಡು ಹಣ್ಣು— ಕೊಟ್ಟಿದ್ದರೆ ಎಷ್ಟು ಚೆನ್ನಾಗಿತ್ತು. ಹೊಟ್ಟೆಗಿಲ್ಲದೆಯೇ ಅವಳ ಮಗು ಸತ್ತಿತೇನೋ? ನಾನಂದು ಕೊಟ್ಟಿದ್ದರೆ ಆದು ಸಾಯುತ್ತಿರಲಿಲ್ಲವೇನೋ? ನಾನೇ ಅವಳ ಪ್ರೇಮದ ಕಂದನನ್ನು ಕೊಂದಂತಾಯಿತು. ಇಂದವಳು ನನ್ನ ಕುಸುಮಾನ ಜೀವ ಉಳಿಸಿದಳು...........ಪಶ್ಚಾತ್ತಾಪ ನನ್ನ ಕರುಳನ್ನಿರಿಯುತ್ತಿತ್ತು. ಅವಳು ಸತ್ತ ಮಗುವನ್ನೆತ್ತಿಕೊಂಡು ಎದೆ ಎದೆ ಬಡಿದುಕೊಳ್ಳುತ್ತಾ ಹೋದ ಹೃದಯವಿದ್ರಾವಕವಾದ ದಾರುಣ ದೃಶ್ಯ ಕಣ್ಣಿಗೆ ಕಟ್ಟಿದಂತಾಗಿತ್ತು. ಅಂದಿನಿರುಳೆಲ್ಲಾ ನನಗೆ ನಿದ್ರೆಯಿಲ್ಲ.

ಈಗಲೂ "ಅಂದು ಕೊಟ್ಟಿದ್ದರೆ?" ಎಂಬ ಪ್ರಶ್ನೆ ಆಗಾಗ ನನ್ನನ್ನು ಕಾಡುತ್ತಿದೆ.

# ಮನೆ

ಸುಶೀಲಾರಾಣಿ ಪ್ರಭಾವತಿಯ ಮನೆಗೆ ಹೋಗಿ ಬಂದಾಗಿನಿಂದ ಚಾರುನಾರಾಯಣನಿಗೆ ಜೀವನದಲ್ಲಿ ಎಳ್ಳಷ್ಟೂ ಸುಖವಿಲ್ಲದಂತಾಯಿತು. ಯಾವಾಗ ನೋಡಿದರೂ ಪ್ರಭಾವತಿಯ ಗಂಡ ಪ್ರೇಮಚಂದನ ದೂರ ದರ್ಶಿತ್ವ, ವ್ಯವಹಾರಜ್ಞಾನ, ವಿವೇಕ, ಹೆಂಡತಿ ಮಕ್ಕಳಲ್ಲಿ ಆತನಿಗಿರುವ ಅಸಾಧಾರಣ ಮಮತೆ ಇತ್ಯಾದಿ ಕಲ್ಯಾಣ ಗುಣಗಳನ್ನೂ, ಅಂಥ ಐಶ್ವರ್ಯಶಾಲೀ ಪತಿಯ ಕೈಹಿಡಿದ ಪ್ರಭಾವತಿಯ ಸುಖಸಂಪತ್ತಿಯನ್ನೂ ಎಷ್ಟು ವರ್ಣಿಸಿದರೂ ದಣಿಯಳು. ಬಾಡಿಗೆ ಮನೆಗಳಲ್ಲಿ ಇದ್ದು ಇದ್ದು ಹಿಂದೆ ತಾವು ಅನುಭವಿಸಿದ, ಈಗ ಅನುಭವಿಸುತ್ತಿರುವ, ಮುಂದೆ ಅನುಭವಿಸಬೇಕಾಗಬಹುದಾದ ವಾಸ್ತವಿಕ, ಹಾಗೂ ಕಾಲ್ಪನಿಕ ಕಷ್ಟನಷ್ಟ ಗಳನ್ನು ಎಂಥ ಕಗ್ಗಲ್ಲೂ ಕರಗುವಂತೆ ಹೇಳಿಕೊಂಡು ಗೋಳಾಡುವಳು. ಮತ್ತು ಕಣ್ಣೀರು ಸುರಿಸುವಳು. ಒಮ್ಮೊಮ್ಮೆ ಸ್ವಂತ ಮನೆಯಿರುವವರ ಸುಖಸೌಕರ್ಯಗಳನ್ನು ಒಂದಕ್ಕೆ ಹತ್ತಾಗಿ ಮಾಡಿ ವರ್ಣಿಸಿ, ತಾವೂ ಒಂದು ಮನೆ ಕಟ್ಟಿದರೆ ಎಷ್ಟು ಚೆನ್ನಾದೀತೆಂದು ಗಂಡನನ್ನು ಪುಸಲಾಯಿಸುವಳು. ತಾವು ತಮ್ಮಿಷ್ಟ ಪ್ರಕಾರ ಎಲ್ಲ ವಿಧದಲ್ಲೂ ತಮಗೆ ಅನುಕೂಲವಾದ ಮನೆಯನ್ನು ಕಟ್ಟಿ, ಅದನ್ನು ತಮ್ಮ ಅಭಿರುಚಿಗೆ ತಕ್ಕಂತೆ ಅಲಂಕರಿಸಿ ಅದರಲ್ಲಿ ತಾವು ವಾಸಿಸಿ ಸುಖಿಸುವ ಸವಿಗನಸನ್ನು ಗಂಡನ ಕಣ್ಣ ಮುಂದೆ ಕಟ್ಟುವಳು.

"ಈ ಮನೆ ಮಾಲೀಕನ ಮೊದ್ದು ಬುದ್ಧೀ ನೋಡಿ. ಮಲಗೋ ಮನೆಗೆ ಹಸುರುಬಣ್ಣ. ಡ್ರಾಯಿಂಗ್ ರೂಮಿಗೆ ಹಳದಿಬಣ್ಣ. ಮೊನ್ನೆ ಪ್ರಭಾವತಿ, ಪ್ರೇಮಚಂದ್, ಲೀಲಾರಾಮ್ ಎಲ್ಲಾ ಬಂದಿದ್ದಾಗ, ಡ್ರಾಯಿಂಗ್ ರೂಮಿನ ಹಳದೀಬಣ್ಣದ ಗೋಡೆಗಳನ್ನ ನೋಡಿನೋಡಿ ನನಗೆ ಮೈ ಪರಚಿಕೊಳ್ಳುವ ಹಾಗಾಗಿತ್ತು. ಈ ದರಿದ್ರ ಮನೆಗೆ ಯಾರನ್ನಾದರೂ ಕರೆಯುವುದಕ್ಕೆ ಸಹ ನನಗೆ ಅವಮಾನವಾಗುತ್ತೆ" ಎಂದು ಬೇಸರಪಟ್ಟು ಕೊಳ್ಳುವಳು. ಒಮ್ಮೊಮ್ಮೆ "ಹಲ್ಲಿದ್ದವರಿಗೆ ಕಡಲೆಯಿಲ್ಲ. ಕಡಲೆ

ಯಿದ್ದವರಿಗೆ ಹಲ್ಲಿಲ್ಲ. ಅವರದ್ದು ಎಂಥ ಸೊಗಸಾದ ಬಂಗಲೆ. ಆದರೆ ಪ್ರಭಾವತಿ ಅದನ್ನ ಇಟ್ಟಿರೋ ತರಹಾ ನೋಡಿದಿರಾ? ನಾನಾದರೆ ಹೇಗಿಡುತ್ತಿದ್ದೆನೋ? ನನಗೆ ದೇವರು ಎಷ್ಟು ಬುದ್ಧೀ ಕೊಟ್ಟಿದ್ದರೆ ತಾನೇ ಏನು ಪ್ರಯೋಜನ?" ಎನ್ನುವಳು. "ತಿಂಗಳು ತಿಂಗಳೂ ಬಾಡಿಗೇ ತೆತ್ತುಕೊಂಡು ಜನ್ಮಾವಧೀ ಬಾಡಿಗೇ ಮನೇಲೇ ಜನ್ಮಾ ಸವೆಸೋಕ್ಕಾಗುತ್ತೇ?" ಎಂದು ಸವಾಲುಹಾಕುವಳು. ಮೂರುಹೊತ್ತೂ ಇದೇ ಪಲ್ಲವಿ. ಸುಶೀಲಾರಾಣಿಯ ಮೋಹನಾಸ್ತ್ರ, ಮಾರಕಾಸ್ತ್ರ (ಅಂದರೆ ಅವಳು ಗಂಡನನ್ನು ಹೊಡೆಯುತ್ತಿದ್ದಳೆಂದಲ್ಲ— ಅವಳ ವಾಗ್ಬಾಣಗಳು ಅಷ್ಟು ತೀಕ್ಷ್ಣವಾಗಿರುತ್ತಿದ್ದುವು) ಗಳೆಲ್ಲಕ್ಕೂ ಬಡಪಾಯಿ ಚಾರುನಾರಾಯಣನ ಬಳಿ ಇದ್ದ ಒಂದೇ ಒಂದು ಪ್ರತ್ಯಸ್ತ್ರವೆಂದರೆ ಮೌನಮುಹಾಸ್ತ್ರ.

ದಿನೇ ದಿನೇ ಮನೆಯ ವಾತಾವರಣ ಬಿಗಡಾಯಿಸುತ್ತಾ ಬಂತು. ಮೊದಲಿನ ಆ ಸರಸ ಸಲ್ಲಾಪ, ಸಂತೋಷ ಎಲ್ಲಾ ಎಲ್ಲಿ ಮಾಯವಾಯಿತೋ? ವಸಂತಋತುವಿನಲ್ಲೇ ಈ ತರುಣ ವಯಸ್ಸಿನ ಗಂಡ ಹೆಂಡಿರ ಮನಸ್ಸನ್ನು ದುಃಖ, ಅಸಮಾಧಾನ, ಆಕ್ರೋಶಗಳ ಕಾರ್ಮೋಡ ಕವಿದುಬಿಟ್ಟಿತು. ತಂದೆ ತಾಯಿಗಳ ಮನಸ್ತಾಪದ ಪರಿಣಾಮ ಮಕ್ಕಳ ಮೇಲೂ ಆಗದೆ ಇರಲಿಲ್ಲ. ಅವುಗಳೂ ಸ್ವಚ್ಛಂದವಾಗಿ ಆಡಿಕೊಳ್ಳುತ್ತಿರಲಿಲ್ಲ. ಆ ಎಳೆಯ ಮಕ್ಕಳ ಮನಸ್ಸಿನಲ್ಲಿ ಅಂಜಿಕೆ, ಅಸ್ಫುಟ ಭೀತಿಯ ಹಾವು ಹೆಡೆಯೆತ್ತಿತ್ತು. ಅಂತೂ ಮನೆಕಟ್ಟಿದ ಹೊರತು ಹಾಯಾಗಿ ಉಸಿರುಬಿಡುವುದಕ್ಕಿಲ್ಲ ಎಂಬಂತಾಗಿತ್ತು ಚಾರುನಾರಾಯಣನ ಪಾಡು. ಸುಶೀಲಾರಾಣಿಯ ಹಠಮಾರಿತನವನ್ನು ಅವನು ಚೆನ್ನಾಗಿ ಬಲ್ಲವನಾಗಿದ್ದನು. ಆದರೆ ಮನೆಕಟ್ಟುವ ದಾರಿ ಕಾಣದೆ ಅವನು ಚಿಂತಿಸುತ್ತಿದ್ದನು.

* * *

ಆ ದಿನ ಅಂಗಡಿಯಲ್ಲಿ ತುಂಬಾ ಕೆಲಸವಿತ್ತು. ಸುಶೀಲಾರಾಣಿ ಏನು ಆಕ್ಷೇಪಣೆ ಮಾಡುವಳೋ ಎಂದು ಅಂಜುತ್ತಾ ಮನೆಗೆ ಹೊತ್ತು ಮೀರಿ ಬಂದನು. ಆದರೆ ಏನು ಅದೃಷ್ಟ ವಿಶೇಷ? ಬಾಗಿಲಲ್ಲೇ ಸುಶೀಲಾರಾಣಿ ಪ್ರಸನ್ನಮುಖಮುದ್ರೆಯಿಂದ ಎದುರುಗೊಂಡಳು.

"ಇವತ್ತು ಏನು ಮಾಡಿದ್ದೇನೆ ಹೇಳಿ ನೋಡೋಣ."

"ಏನು ಮಾಡಿದ್ದೀ?"

"ನನ್ನ ಪ್ರಶ್ನೆಗೆ ಉತ್ತರ ಕೊಡಬೇಕಾದವರು ನೀವು. ನನಗೇ ಮರುಪ್ರಶ್ನೆ ಹಾಕುತ್ತಿದ್ದೀರಲ್ಲಾ.

"ಬಿಸಿ ಬಿಸಿ ಟೀ ಒಂದೇ ಗುಟುಕಿಗೆ ಹೀರಿ ಚಾರುನಾರಾಯಣ ಹೇಳಿದನು. "ಏನು ನನಗೆ ಇಷ್ಟವಾದ 'ಕಚೋರಿ' (ಕಚೋರಿ=ಉತ್ತರ ದೇಶದಲ್ಲಿ ಗೋಧಿಯ ಹಿಟ್ಟಿನಿಂದ ಮಾಡುವ ಒಂದು ತಿಂಡಿ) ಮಾಡಿದ್ದೀಯೋ?"

"ಉಹ್ಞಂ"

"ಅಥವಾ ಕಲಾಕಾಂಡ್ ಮಾಡಿದ್ದೀಯೋ? ಗುಲಾಬ್ ಜಾಮೂನ್ ಮಾಡಿದ್ದೀಯೋ?"

"ಉಹ್ಞಂ"

"ನನಗಾಗಿ ಹಾಕುತ್ತಿದ್ದ ಆ ನೇವಿಬ್ಲೂ ಷರಟು ಇವತ್ತು ಮುಗಿಸಿದೆಯೋ?"

"ಉಹ್ಞಂ"

"ನೀನೇನು ಮಾಡಿದ್ದೀಯೋ. ನನಗೆ ಹೇಗೆ ಗೊತ್ತಾಗಬೇಕು? ನನಗೇನೂ ಕನಸು ಬೀಳಲಿಲ್ಲ."

"ಇವತ್ತು ಒಂದು ಸೈಟು ಖರೀದಿ ಮಾಡಿದೆ."

"ಏನಂದೆ?" ಸೋಫಾದ ಮೇಲೆ ಒರಗಿ ಕುಳಿತಿದ್ದವನು ಒಮ್ಮೆಲೇ ಜಗಿದು ಕುಳಿತನು ಚಾರುನಾರಾಯಣ.

"ಸೈಟು ಖರೀದಿಮಾಡಿದೆ."

"ನೀನು? ಹೇಗೆ? ಎಲ್ಲಿ? ಯಾವಾಗ? ನಿನ್ನ ಹತ್ತಿರ ಅಷ್ಟು ಹಣ ತಾನೇ ಎಲ್ಲಿಂದ ಬಂತು? ಸುಳ್ಳು. ನನ್ನ ಹತ್ತಿರ ತಮಾಷೆಮಾಡುತ್ತಿದ್ದೀಯೋ?"

ನಿನ್ನೆ "ಲಾಹೋರ್ ನ್ಯೂಸ್" ಪತ್ರಿಕೇಲಿ ಬಂದಿರಲಿಲ್ಲವೇ ಸೈಟುಗಳು ಮಾರಾಟಕ್ಕಿವೇಂತ. ನೀವು ೧ ಗಂಟೆಗೆ ಊಟಮಾಡಿಕೊಂಡು ಹೋದಿರಲ್ಲಾ. ಆಮೇಲೆ ನಾನು ಕಮಲಾದೀದಿಯ ಮನೆಯಲ್ಲಿ ಮಕ್ಕಳನ್ನು

ಬಿಟ್ಟು, ಟಾಂಗಾ ಮಾಡಿಕೊಂಡು ಹರಾಜಿನ ಜಾಗಕ್ಕೆ ಹೋದೆ. ನಿಮ್ಮ ಸ್ನೇಹಿತರು ಮಹಲ್‌ರಾಮ್ ಸೇಠ್‌ಜೀ ನನ್ನನ್ನು ಗುರುತಿಸಿ ವಂದಿಸಿದರು. ನಾನು ಕೊಂಚ ಸೈಟುಗಳನ್ನು ನೋಡಬೇಕಲ್ಲಾ ಎಂದೆ. ಅವರೇ ಖುದ್ದಾಗಿ ನನಗೆ ತೋರಿಸಿದರು. ಸ್ವಲ್ಪ ಹೊತ್ತು ಮಾತುಕತೆಯಾಡುತ್ತಿದ್ದೆವು. ಅಲ್ಲಿದ್ದ ಅತ್ಯುತ್ತಮ ಸೈಟನ್ನು ಅತ್ಯಂತ ಕಡಿಮೆ ಬೆಲೆಗೆ ಗಿಟ್ಟಿಸಿದೆ, ಎರಡು ಸಾವಿರ ರೂಪಾಯೊಳಗೆ. ನನ್ನ ಹತ್ತಿರ ನಗದು ಹಣವಿಲ್ಲ. ನಾಳೆ ಸಂಜೆಯೊಳಗೆ ನಮ್ಮ ಯಜಮಾನರು ನಿಮಗೆ ಹಣ ತಲಪಿಸುತ್ತಾರೆ ಎಂದೆ. ಅವರು ನಾಳೆ ಅಲ್ಲದಿದ್ದರೆ ನಲವತ್ತು ದಿನಗಳ ಮೇಲೆ ಕೊಡಿ. ಎಲ್ಲಿ ಹೋಗುತ್ತೆ ಹಣ? ಎಂದರು. ಬಹಾಳ ಒಳ್ಳೆಯವರಾಗಿ ಕಾಣಿಸುತ್ತಾರೆ ಸೇಠ್‌ಜೀ" ಸೈಟು ಕೊಂಡ ಉತ್ಸಾಹ, ಗಂಡ ಎಲ್ಲಿ ಸಿಟ್ಟಿಗೇಳುವನೋ ಎಂಬ ಕಾತರ ಎರಡೂ ಕೂಡಿತ್ತು ಅವಳ ಧ್ವನಿಯಲ್ಲಿ.

ಚಾರುನಾರಾಯಣ ಸಿಟ್ಟಿನಿಂದಲೇ ಹೇಳಿದನು—"ಅಬ್ಬಾ! ಏನು ಅದ್ಭುತ ಹೆಂಗಸು ನೀನು? ಶಾಭಾಷ್! ಏನು ಧೈರ್ಯ ನಿನ್ನದು. ನನ್ನನ್ನು ಒಂದು ಮಾತು ಕೇಳದೆ ಇಷ್ಟು ಪಾರುಪತ್ಯ ನಡೆಸಿದ್ದೀಯಲ್ಲಾ! ಅಲ್ಲಾ, ಸೈಟಿಗೆ, ಮನೆಕಟ್ಟೋಕೆ ಹಣಾ ಎಲ್ಲಿ ತರಲಿ ನಾನು?"

"ಗಂಡಸಾಗಿ, ನನ್ನ ಮುಂದೆ ಹಣ ಎಲ್ಲಿ ತರಲಿ ಅಂತ ಅತ್ತರೆ, ಆಹಾ! ಏನು ಹೇಳಲೋ ನನ್ನ ಭಾಗ್ಯವನ್ನ."

ಈಗ ಮಾತ್ರ ಚಾರುನಾರಾಯಣನಿಗೆ ನಿಜವಾಗಿ ಸಿಟ್ಟೇರಿತು. ನೋವೂ ಆಯಿತು—"ನಾನು ನಾಲಾಯಕ್ ಗಂಡ ಹೌದಲ್ಲೋ. ನೀನು ಸಾಮರ್ಥ್ಯಶಾಲೀ ಹೆಂಗಸು. ನಾನು ಸುಮ್ಮನೆ ನನ್ನ ಪಾಡಿಗೆ ಇದ್ದು ಬಿಡತೇನೆ. ನೀನು ನಾಳೆಯೊಳಗೆ ಅಲ್ಲದಿದ್ದರೆ ನಲವತ್ತು ದಿನದೊಳಗೆ ಸೇಠ್‌ಜೀಗೆ ಹ್ಯಾಗಾದರೂ ಹಣ ಮುಟ್ಟಿಸಿಕೋ. ನಿನ್ನ ಇಷ್ಟ ಬಂದ ಹಾಗೆ ಮನೆ ಕಟ್ಟು. ನೀನು ಕಟ್ಟಿ ಮುಗಿಸಿದ ಮೇಲೆ ಈ ಸುಡುಗಾಡು ಬಾಡಿಗೇ ಮನೇಬಿಟ್ಟು ನೀನು ಕಟ್ಟಿಸಿದ ಮನೆಯಲ್ಲಿ ಬಂದು ಇರಲು ನನ್ನ ಸಂಪೂರ್ಣ ಸಹಮತಿಯಿದೆ. ಸರಿಯೇ. ನಿನ್ನಂಥಾ ಗಟ್ಟಿಗ ಹೆಂಗಸನ್ನ ಭಾಗ್ಯವಶಾತ್ ನಾನು ಕೈಹಿಡಿದಿರುವಾಗ ನನಗ್ಯಾಕೆ ತಂಟೆ ತಾಪತ್ರಯ." ಎಂದು ಎದ್ದು ಹೊರಗೆ ಹೊರಟನು.

ಈಗ ಮಾತ ಸುಶೀಲಾರಾಣಿಗೆ ಮುಗಿಲೇ ಮೈಮೇಲೆ ಕಡಿದು ಕೊಂಡು ಬಿದ್ದಂತಾಯಿತು. ಗಂಡ ಹಣ ಒದಗಿಸಿಕೊಡದಿದ್ದರೆ ತಾನು ಏನು ಮಾಡಬೇಕು? ಸೈಟು ಹಿಂತಿರುಗಿಸುವುದೇ? ಮನೇ ಕಟ್ಟುವ ಹೊಂಗನಸನ್ನು ಹುಡಿಗೂಡಿಸುವುದೇ? ಸಮಯಕ್ಕೆ ಸರಿಯಾಗಿ. ಸೇಠ್‌ಜೀಗೆ ಹಣ ಕೊಡದಿದ್ದರೆ ತನ್ನ ಮರ್ಯಾದೆ ಏನಾಯಿತು? ಅದೂ ನಗರದ ಹತ್ತು ಜನ ಪ್ರತಿಷ್ಠಿತ ಗೃಹಸ್ಥರ ನೆರವಿಯಲ್ಲಿ ಮಾತುಕತೆಯಾಡಿ ದ್ದಳು. ಸುಶೀಲಾರಾಣಿ ಗಂಡ ತನ್ನ ಕೆಲಸಕ್ಕೆ ಸುಲಭದಲ್ಲಿ ಅಸ್ತು ಎನ್ನಲಾರನೆಂದು ಬಗೆದೇ ಇದ್ದಳು. ಸಿಟ್ಟಿಗೇಳಬಹುದೆಂದೂ ನಿರೀಕ್ಷಿಸಿ ದ್ದಳು. ಆದರೆ ಪರಿಸ್ಥಿತಿ ಇಷ್ಟೊಂದು ಪ್ರಕೋಪಕ್ಕೆ ಹೋಗಬಹುದೆಂದು ನೆನೆಸಿರಲಿಲ್ಲ. ಗಂಡನನ್ನು "ಕ್ಷಮಿಸಿ" ಎಂದು ಕೇಳುವುದಕ್ಕೂ ಅವಮಾನ. ಮುಳುಮುಳು ಅಳತೊಡಗಿದಳು. ಆಸೆ, ದುಃಖ, ಭಯ. ಕಾತರಗಳ ಮಹಾಪೂರದಲ್ಲಿ ಕೊಚ್ಚಿಹೋಗುತ್ತಿದ್ದಳವಳು. ದರ್ಪ ಹುಡಿ ಗೂಡಿತ್ತು. ಸಂತೋಷ ಸತ್ತುಹೋಗಿತ್ತು.

ಚಾರುನಾರಾಯಣ ಬಂದು, "ಏಳು ರಾಣೀ, ಇದೇನು ಅಳುತ್ತಿದ್ದಿ? ಹುಚ್ಚೀ, ನಿನ್ನ ಮನಸ್ಸಿಗೆ ನೋವಾಗಬೇಕೆಂದು ನನಗೆ ನಿಜವಾಗಿ ಇರಲಿಲ್ಲ ನೋಡು. ನನ್ನನ್ನು ಕ್ಷಮಿಸುವಿಯಲ್ಲವೇ? ಏಳು ಮತ್ತೆ, ಹೋಗಿ ಆ ಸೈಟ್ ನೋಡಿಕೊಂಡು ಬರೋಣ. ಹಾಗೆಯೇ ಸೇಠ್‌ಜೀಗೆ ಹಣಾನೂ ಕೊಟ್ಟು ಬರೋಣ.

ಆಶ್ಚರ್ಯದಿಂದ ಸುಶೀಲಾರಾಣಿ ತಲೆಯೆತ್ತಿ ನೋಡಿದಳು. ಗಂಡನ ಮುಖದಲ್ಲಿ ಸ್ನೇಹ ಮತ್ತು ಕರುಣೆಯಿಂದ ಕೂಡಿದ ಮಧುರವಾದ ನಗು. ಕೈಯಲ್ಲಿ ಹಸುರು ನೋಟುಗಳ ಕಟ್ಟು. ಸುಶೀಲಾರಾಣಿಗೆ ಆ ಗಳಿಗೆಗೆ ಗಂಡ ದೇವತೆಯಂತೆ ಕಂಡಿದ್ದರೆ ಆಶ್ಚರ್ಯವಿಲ್ಲ.

ಹಣ ಒದಗಿಸಿಕೊಳ್ಳುವುದು, ಮನೇ ಕಟ್ಟುವುದು, ಸುಶೀಲಾರಾಣಿ ಊಹಿಸಿದ್ದಕ್ಕಿಂತ ಸಾವಿರ ಪಾಲು ಹೆಚ್ಚು ಕಷ್ಟಕರವಾಗಿತ್ತು. ಚಾರುನಾರಾಯಣ ತನ್ನೊಂದು ಇನ್ಷೂರೆನ್ಸ್ ಪಾಲಿಸಿಯನ್ನು ಮಾರಿ ಹೇಗೋ ಸೈಟಿಗೆ ಹಣ ಒದಗಿಸಿಕೊಂಡು ಬಂದಿದ್ದನು.

ಬ್ಯಾಂಕಿನ ಅಕೌಂಟ್ ಬ್ಲ್ಯಾಂಕ್ ಆಯಿತು. ಚಾರುನಾರಾಯಣ

ತನ್ನ ಅಂದವಾದ ಚಿನ್ನದ ಗಡಿಯಾರವನ್ನೂ, ತನಗೆ ಅತ್ಯಂತ ಪ್ರಿಯವಾಗಿದ್ದ ಪಚ್ಚೆಯ ಉಂಗುರವನ್ನೂ, ಮಾರಬೇಕಾಯಿತು. ಸುಶೀಲಾರಾಣಿಯ ಬಳಿ ಬಹಳವೇನೂ ಒಡವೆ ವಸ್ತುಗಳಿರಲಿಲ್ಲ. ಇದ್ದಬದ್ದದ್ದನ್ನು ಮಾರುವುದು ಗಂಡಹೆಂಡಿರಿಗೆ ಇಷ್ಟವಿರಲಿಲ್ಲ. ತನ್ನ ಅಂಗಡಿಯ ಪಾಲುಗಾರನೊಡನೆ, ನಾಲ್ಕೈದು ಮಂದಿ ಮಿತ್ರರೊಡನೆ, ವಿಮಾ ಕಂಪೆನಿಯಲ್ಲಿ, ಹಿಂದೆ ತಾನು ಕೆಲಸಮಾಡುತ್ತಿದ್ದ ಬ್ಯಾಂಕಿನಲ್ಲಿ ಸಾಲಮಾಡಿ ಮನೆಕಟ್ಟಲಾರಂಭಿಸಿದನು.

ಮನೇಕಟ್ಟಲು ಸೈಟಿನ ಹಣವೂ ಸೇರಿ ಒಟ್ಟು ೮ ಸಾವಿರ ರೂಪಾಯಿಯಾಗಬಹುದೆಂದು ಅಂದಾಜು ಹಾಕಿ ಅಷ್ಟರೊಳಗೆ ಮನೇ ಕಟ್ಟಬೇಕೆಂದು ನಿಶ್ಚಯಿಸಿಕೊಂಡಿದ್ದರು. ಕಂಟ್ರ್ಯಾಕ್ಟರು ಅಷ್ಟರೊಳಗೇ ಕಟ್ಟಿಕೊಡುವುದಾಗಿ ಭರವಸೆಯಿತ್ತಿದ್ದನು. ಅಸ್ತಿವಾರ ಹಾಕಿದನಂತರ ಇನ್ನೊಂದು ಸಾವಿರ ಹೆಚ್ಚಾದರೂ ಆದೀತೆಂದು ಸಂಕೋಚಪೂರ್ವಕವಾಗಿ ಬಿನ್ನವಿಸಿಕೊಂಡನು. ಅರೆಪಾಲು ಗೋಡೆಗಳು ಎದ್ದಮೇಲೆ ಅದೇ ಕಂಟ್ರ್ಯಾಕ್ಟರು ಎಲ್ಲಾ ಒಟ್ಟು ಹತ್ತು ಸಾವಿರವಾಗಬಹುದೆಂದು ಅನುಮಾನಿಸಿದನು. ಅಷ್ಟರಲ್ಲಿ ಮನೇ ಕಟ್ಟಲಾರಂಭಿಸಿ ಮೂರು ತಿಂಗಳುರುಳಿದ್ದುವು. ತಾರಸಿ ಹಾಕುವ ಹೊತ್ತಿಗಾಗಲೇ ಹನ್ನೆರಡು ಸಾವಿರ ರೂಪಾಯಿಗಳ ಹತ್ತಿರ ಹತ್ತಿರ ಖರ್ಚಾಗಿತ್ತು. ಬಾಗಿಲು, ಕಿಟಕಿ, ಸುಣ್ಣ ಬಣ್ಣ, ಇನ್ನಿತರ Finishing touches ಕೊಡುವ ಹೊತ್ತಿಗೆ ಪೂರಾ ಹದಿಮೂರು ಸಾವಿರ ರೂಪಾಯಿ ಚಾರುನಾರಾಯಣನ ಕೈಬಿಟ್ಟುಹೋಗಿತ್ತು. ಅಷ್ಟರಲ್ಲಿ ಆರು ತಿಂಗಳುರುಳಿದ್ದುವು. ಆದರೆ ಒಮ್ಮೆಗೇ ಚಾರುನಾರಾಯಣನಿಗೆ ನಾಲ್ಕೆಂಟು ವರ್ಷ ಹೆಚ್ಚು ವಯಸ್ಸಾದಂತೆ ಭಾಸವಾಗುತ್ತಿತ್ತು. ಅವನ ತಲೆಯಲ್ಲಿ ನಾಲ್ಕೆಂಟು ನರೆಗೂದಲೂ ಮೂಡಿದ್ದುವು.

ಇಷ್ಟರಲ್ಲಿ ಅವರ ಒಂದು ಮಗುವಿಗೆ ರಿಕೆಟ್ಸ್ ಆಗಿ ಅನಂತರ ಡಿಫ್ತೀರಿಯಾ ಆಗಿ ಆ ಮಗುವಿನ ಉಸಿರು ಉಳಿಸಿಕೊಳ್ಳುವ ಹೊತ್ತಿಗೆ ಎರಡು ಸಾವಿರ ರೂಪಾಯಿ ತೊಳೆದುಹೋಯಿತು. ಈ ನಡುವೆ ಸುಶೀಲಾರಾಣಿ ಜೇಕಿ ಖಾಯಿಲೆ ಬಿದ್ದು ಎದ್ದಳು. ಅವಳ ಖಾಯಿಲೆಯ ದೆಸೆಯಿಂದ ಅಷ್ಟೇನೂ ದುಡ್ಡು ಖರ್ಚಾಗದಿದ್ದರೂ ಅವಳು ಎಲುಬಿನ ಹಂದರವಾಗಿದ್ದಳು.

ತಿಂಗಳು ತಿಂಗಳೂ ಸಾಲದ ಕಂತು, ಹಾಗೂ ಬಡ್ಡಿಗಳನ್ನು ಕಟ್ಟಿ ಸಂಸಾರ ಸಾಗಿಸುವುದು ಸುಲಭವಾಗಿರಲಿಲ್ಲ. ಈ ನಡುವೆ ಅಂಗಡಿಯ ವ್ಯಾಪಾರ ಬೇರೇ ಚೆನ್ನಾಗಿ ನಡೆಯುತ್ತಿರಲಿಲ್ಲ. ಮಡ್ಡಿನದೊಂದು ದೊಡ್ಡ ಸಮಸ್ಯಾಭೂತ ಗಂಡಹೆಂಡಿರ ಎದಿರು ನಿಂತಿತು. ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದ ಅವಳ ಮೈದುನ ರಾಮಗೋಪಾಲನಿಗೆ ಮಾಸಮಾಸವೂ ಕಳುಹಿಸುತ್ತಿದ್ದ ೮೦ ರೂ. ಮೊಬಲಗನ್ನು ನಿಲ್ಲಿಸಿಬಿಡುವ ಮಾತು ಬಂತು. ಚಾರುನಾರಾಯಣನಿಗೆ ತಮ್ಮನ ಓದುಗೆಡಿಸುವ ಯೋಚನೆ ರುಚಿಸಲಿಲ್ಲ. ಅವನೆಂದ—"ಇಷ್ಟಕ್ಕೂ ಇನ್ನು ನಾಲ್ಕು ವರ್ಷ ತಾನೇ? ಅವನು ತಾನು ಡಾಕ್ಟರಾಗಿ ಹೇಗೆಲ್ಲಾ ಬದುಕಬೇಕೆಂದು ಕನಸು ಕಾಣುತ್ತಿರುವನೋ? ಮೊನ್ನೆ ಕೂಡ ತನ್ನ ಕಾಲೇಜು ಜೀವನದ ಬಗ್ಗೆ ಅದೆಷ್ಟು ಉತ್ಸಾಹದಿಂದ ಪತ್ರ ಬರೆದಿದ್ದನು? ನನ್ನನ್ನು ಕಂಡರೆ ಅವನಿಗೆ ಜೀವ. ನಿನ್ನನ್ನು ಕಂಡರೆ ಎಷ್ಟು ಗೌರವ? ನಾವು ಇಟ್ಟಿಗೆ ಗಾರೆಯ ಮನೆಯನ್ನು ಕಟ್ಟು ವುದರ ಸಲುವಾಗಿ ನನ್ನ ಏಕಮಾತ್ರ ಸೋದರನ ಆಶಾಮಂದಿರಗಳನ್ನು ನೆಲಸಮ ಮಾಡಲೇ?" ವ್ಯಾಕುಲನಾಗಿ ಕೇಳಿದ ಚಾರುನಾರಾಯಣ.

"ಆಗಲಿ, ನಾವು ಹೀಗೆಯೇ ಅರೆಹೊಟ್ಟೆ ಉಂಡು ಸಾಯುತ್ತೇವೆ. ನಿಮ್ಮ ತಮ್ಮ ಡಾಕ್ಟರಾಗಿ ಮೆರೆಯಲಿ. ಲೋಕೋದ್ಧಾರ ಮಾಡಲಿ" ಸಿಡುಕಿದಳು ಸುಶೀಲಾರಾಣಿ.

"ನಾನೇನು ರಾಮಭೈಯ್ಯಾನ ದೆಸೆಗೇಡಿ ಮಾಡಬೇಕು ಅಂತಿದ್ದೇನೆಯೇ? ಇಲ್ಲಿಯೇ ಬಂದಿರಲಿ. ಅಂಗಡೀಲಿ ನಿಮಗೆ ಸಹಾಯ ಮಾಡಿಕೊಂಡು ನಾಲ್ಕು ಕಾಸು ತಗೊಂಡು ಕೂಡಿಡುತ್ತಾ ಬರಲಿ. ಮುಂದೆ ಅವನ ಸಂಸಾರಕ್ಕೇ ಉಪಯೋಗ. ಇಲ್ಲೇ ನಮ್ಮ ಮನೇಲೇ ಊಟ ಮಾಡಿಕೊಂಡಿರಲಿ. ನಮಗೂ ಮೂರು ಮಕ್ಕಳಿವೆ ಅನ್ನೋದನ್ನ ಮರೆಯ ಬೇಡಿ."

ಕ್ಷೀಣಕಾಯಳಾದ ಸುಶೀಲಾರಾಣಿಯನ್ನೂ, ತೆವಳುತ್ತಾ ತನ್ನ ಬಳಿಗೆ ಬಂದ ಕಾಂತಿಯ ಕೋಮಲ–ದುರ್ಬಲ ಶರೀರವನ್ನೂ ನೋಡಿ ಅವನಿಗೆ ದಯೆ ಉಕ್ಕಿಬಂತು. ಕಾಂತಿಗೆ ಖಾಯಿಲೆ ಗುಣವಾಗಿದ್ದರೂ ಪುಷ್ಟಿಕರವಾದ ಆಹಾರ, ಪಥ್ಯೋಪಚಾರಗಳ ಅಗತ್ಯವಿತ್ತು. ಸಿರಿವಂತ

ರಲ್ಲದಿದ್ದರೂ ಚೆನ್ನಾಗಿ ಉಂಡುಟ್ಟು ಸುಖಪಟ್ಟಿದ್ದ ಅವರಿಗೆ ಬರೀ ಒಣ ರೊಟ್ಟಿ ನೀರಿನ ಮೇಲೆ ಕಾಲತಳ್ಳುವುದೂ ಸಾಧ್ಯವಿರಲಿಲ್ಲ. ಉಪಾಯ ವಿಲ್ಲದೆ ರಾಮಗೋಪಾಲನಿಗೆ ಕಳುಹಿಸುತ್ತಿದ್ದ ಹಣವನ್ನು ನಿಲ್ಲಿಸ ಬೇಕಾಯಿತು. ಈ ಬಗ್ಗೆ ರಾಮಗೋಪಾಲ ಅಣ್ಣನನ್ನು ಆಕ್ಷೇಪಿಸಲಿಲ್ಲ. ಆದರೆ ಅವನು ಬೊಂಬಾಯನ್ನು ಬಿಟ್ಟು ಬರಲು ಒಪ್ಪಲಿಲ್ಲ.

* * *

ಹನ್ನೆರಡು ವರ್ಷಗಳು ಉರುಳಿಹೋಗಿದ್ದುವು. ಭಾಗ್ಯಲಕ್ಷ್ಮಿ ಚಾರುನಾರಾಯಣನ ಮೇಲೆ ತನ್ನ ಕಟಾಕ್ಷವನ್ನು ಬೀರಿದ್ದಳು. ಅವನ ಸಾಲಸೋಲಗಳೆಲ್ಲಾ ತೀರಿ ಆರೇಳು ವರ್ಷಗಳಾಗಿದ್ದುವು. ಈಗ ಅಂಗಡಿಯ ಒಡೆತನ ಅವನೊಬ್ಬನದೇ ಆಗಿತ್ತು. ವ್ಯಾಪಾರವೂ ಚೆನ್ನಾಗಿ ಸಾಗಿತ್ತು. ಲಾಹೋರ್ ನಗರದಲ್ಲಿ ಅವನೊಬ್ಬ ಗಣ್ಯ ವರ್ತಕನಾಗಿದ್ದನು. ಮೊದಲಿನ ಆರೇಳುವರ್ಷ ಸಾಲದ ಶೂಲದಲ್ಲಿ ಸಿಕ್ಕಿ, ಅನೇಕ ವಿಧದಲ್ಲಿ ಕಷ್ಟನಷ್ಟ ಅಪಜಯಗಳುಂಟಾಗಿ, ಅವರ ಮುದ್ದಿನ ಕಿರಿಯ ಮಗಳು ಕಾಂತಿ ತೀರಿ ಕೊಂಡು, ಅವರು ದುಃಖದ ಹಾಲಾಹಲವನ್ನು ಹೃದಯದಲ್ಲಿ ತುಂಬಿ ಕೊಂಡರೂ ಸಹ, ಈಗ ಅವರ ಜೀವನಾಕಾಶ "ಹಗಲೆಲ್ಲ ಹೊಂಬಿಸಿಲು, ಇರುಳೆಲ್ಲ ಬೆಳದಿಂಗಳು" ಎಂಬಂತೆ ಆಗಿತ್ತು. ಚಾರುನಾರಾಯಣ, ಸುಶೀಲಾರಾಣಿಯರಿಗೆ ಪೃಥ್ವಿ ಪ್ರತಿಸ್ವರ್ಗವಾಗಿತ್ತು. ಈ ಹೊತ್ತು ಅವರಿಗೆ ಅಂದವಾಗಿ ಪರಿಷ್ಕೃತವಾದ ಸುಂದರವಾದ ಮನೆ, ಮುತ್ತಿನ ಮಣಿಯಂತೆ ಮುದ್ದಾದ ಮಕ್ಕಳು, ಗ್ಯಾರೇಜಿನಲ್ಲಿ ಕಾರು, ಬ್ಯಾಂಕಿನಲ್ಲಿ ಸಾವಿರಾರು ರೂಪಾಯಿ, ಸರೀಕರಲ್ಲಿ ಸನ್ಮಾನ ಎಲ್ಲಾ ಇತ್ತು.

ಆದರೆ ಇದ್ದಕ್ಕಿದ್ದ ಹಾಗೆ ಏನಾಗಿಹೋಯಿತು! ಮತದ್ವೇಷದ ಹೊಗೆ ಯಾಡಲಾರಂಭಿಸಿತು. ನವದೆಹಲಿಯಲ್ಲಿ ಶತಮಾನದ್ವಯಗಳ ನಂತರ ಒಲಿಸಿಕೊಂಡ ಸ್ವಾತಂತ್ರ್ಯದೇವಿಗೆ ಸಂಭ್ರಮದಿಂದ ಆರತಿ ಎತ್ತುತ್ತಿರುವ ಹೊತ್ತಿನಲ್ಲಿ ಪಂಜಾಬಿನಲ್ಲಿ ದೇವರು, ಧರ್ಮಗಳ ಹೆಸರಿನಲ್ಲಿ ಮಾನವತ್ವದ ಸಂಹಾರವಾಗಲಾರಂಭಿಸಿತು. ಕ್ಷಣದಲ್ಲಿ ನಾಗರಿಕ ಜೀವನದ ಸಮಸ್ತ ಸಂಭ್ರಮಗಳಿಂದ ತುಂಬಿ ಮೆರೆಯುತ್ತಿದ್ದ ಸಿರಿಹೊಳಲು ಸ್ಮಶಾನ ಸದೃಶ ವಾಯಿತು.

ಒಂದು ಸಂಜೆ ಹೊರಗಿನಿಂದ ಬಂದ ಚಾರುನಾರಾಯಣ "ಇಂದಲ್ಲ ನಾಳೆ ನಾವು ಇಲ್ಲಿಂದ ಓಡಿಹೋಗಬೇಕಾಗುತ್ತದೆ ರಾಣೀ, ಬಹು ಕಷ್ಟಪಟ್ಟು ೨೦ ಗ್ಯಾಲನ್ ಪೆಟ್ರೋಲ್ ಕೂಡಿಸಿಟ್ಟುಕೊಂಡಿದ್ದೇನೆ. ನಾನು ಹೇಳಿದ ಕ್ಷಣದಲ್ಲಿ ಹೊರಡಲು ಸಿದ್ಧಳಾಗಿರು" ಎಂದು ಹೇಳಿದನು. ಸುಶೀಲಾ ರಾಣಿ ಆ ರಾತ್ರಿ ಮನೆಯಲ್ಲಿ ಮೈಮೇಲೆ ಇದ್ದ ಬದ್ದ ಚಿನ್ನದೊಡವೆಗಳನ್ನೆಲ್ಲಾ ಕಳಚಿಟ್ಟಳು. ದಪ್ಪನಾದ ನಾಲ್ಕು ಗೋಧಿಯ ರೊಟ್ಟಿಯನ್ನು ಲಟ್ಟಿಸಿದಳು; ಒಳಗೆ ಚಿನ್ನದ ಒಡವೆಗಳನ್ನಿಟ್ಟಿದ್ದಳು. ತಾನು ಅತ್ಯಗತ್ಯವಾಗಿ ತೆಗೆದುಕೊಂಡು ಹೋಗಬೇಕಾದ ಸಾಮಾನುಗಳನ್ನು ಗಂಟು ಕಟ್ಟಿಟ್ಟಳು. "ದೇವರೇ, ನೀನೇ ನಮ್ಮನ್ನು ಈ ಸಂಕಟದಿಂದ ಪಾರುಮಾಡಬೇಕು" ಎಂದು ಬೇಡಿಕೊಳ್ಳುತ್ತಿದ್ದಳು.

* * *

ಒಂದು ಸಂಜೆ ಇದ್ದಕ್ಕಿದ್ದಹಾಗೆ ದೊಡ್ಡಮಗಳು ಪತ್ತೆಯಿಲ್ಲದ ಹಾಗಾದಳು. ಚಾರುನಾರಾಯಣ ಆತಂಕದಿಂದ ತುಂಬಿದವನಾಗಿ ಮಗಳನ್ನು ಹುಡುಕಹೊರಟನು. ಅಷ್ಟರಲ್ಲಿ ಅವನ ಅಂಗಡಿಯ ಆಳು ರಹಮಾನ್ ಬಂದು ಸಲಾಮ್ ಮಾಡಿ ಹೇಳಿದನು—"ಸಾಹೆಬ್, ಗೂಂಡಾಗಳು ನಿಮ್ಮ ಅಂಗಡಿಗೆ ಬೆಂಕಿ ಇಟ್ಟಿದ್ದಾರೆ. ಈಗ ನಿಮ್ಮ ಮೊಹಲ್ಲಾ ಕಡೆ ಬರುತ್ತಿದ್ದಾರೆ. ತಕ್ಷಣ ಓಡಿರಿ. ಹೇಗಾದರೂ ತಲೆ ಉಳಿಸಿಕೊಳ್ಳಿ. ನಾನು ಇಸ್ಲಾಂ ಭಕ್ತ. ಆದರೆ ನಮಕ್ ಹರಾಮ್ ಅಲ್ಲ. ಅಂತೆಯೇ ನಿಮಗೆ ಎಚ್ಚರಿಕೆ ಹೇಳಲು ಬಂದಿದೇನೆ."

ಚಾರುನಾರಾಯಣ ಆತುರಾತುರವಾಗಿ ಮನೆಯವರನ್ನೆಲ್ಲಾ ಕರೆದುಕೊಂಡು ಹೊರಟನು. "ಪಾಕೀಸ್ಥಾನ್ ಜಿಂದಾಬಾದ್, ಹಿಂದೂಸ್ಥಾನ್ ಮುರ್ದಾಬಾದ್" ಎಂದು ಕೂಗಿಕೊಂಡು ಕೆಂಗಣ್ಣಿನ, ಶಸ್ತ್ರಧಾರಿಗಳಾದ ಉನ್ಮತ್ತ ಗೂಂಡಾಗಳ ತಂಡವೊಂದು ಇವರ ಮನೆಯ ಬಳಿಗೇ ಬಂತು. ಚಾರುನಾರಾಯಣನ ಮನೆಯ ಹಿತ್ತಲಬಾಗಿಲು ಕಿರಿದು. ಅಲ್ಲಿಂದ ಕಾರು ಹೊರಡಿಸಿಕೊಂಡು ಹೊರಡುವ ಹಾಗಿರಲಿಲ್ಲ. ಮುಂಬಾಗಿಲಿಂದ ಹೊರಡುವುದು ಎಂದರೆ ಗೂಂಡಾಗಳ ಕೈಗೆ ಸಿಕ್ಕಿಬಿದ್ದಂತೆಯೇ. ಕಾರು ಇದ್ದೂ

ಪ್ರಯೋಜನಕ್ಕೆ ಬಾರದಹಾಗಾಯಿತು. ಹಿಂಬಾಗಿಲಿಂದ ಸತ್ತೆವೋ, ಕೆಟ್ಟೆವೋ ಎಂದುಕೊಂಡು ಏಳುವುದು ಬೀಳುವುದನ್ನೂ ಕಾಣದೆ ಪರಾರಿಯಾಗಬೇಕಾಯಿತು.

ಕ್ಷಣಾರ್ಧದಲ್ಲಿ ಪುಂಡರು ಮನೆಯನ್ನೆಲ್ಲಾ ಹುಡುಕಿ ಯಾರೂ ಇಲ್ಲದ್ದನ್ನು ಕಂಡು ಬೆಂಕಿ ಬೆಂಕಿಯಾದರು. ಬೆಲೆಬಾಳುವ ಸಾಮಾನುಗಳನ್ನು ಲೂಟಿಮಾಡಿ ಚಾರುನಾರಾಯಣ ಓಡಿಹೋಗಲು ಬಹು ಕಷ್ಟಪಟ್ಟು ಮೊರಕಿಸಿಕೊಂಡು ಕೂಡಿಸಿಟ್ಟುಕೊಂಡಿದ್ದ ಪೆಟ್ರೋಲನ್ನು ಸುರಿದು, ಎಲ್ಲಾದರೂ ಈ ಮನೆಯಲ್ಲಿ ಅವಿತಿಟ್ಟುಕೊಂಡಿದ್ದರೆ ಕಾಫರರು ಭಸ್ಮವಾಗಲೆಂದು ಮನೆಗೆ ಬೆಂಕಿಯಿಟ್ಟರು.

ಮಕ್ಕಳನ್ನು ಕಟ್ಟಿಕೊಂಡು, ಸಾಮಾನನ್ನು ಹೊತ್ತುಕೊಂಡು ಕಾಲ್ನಡಗೆಯಲ್ಲಿ ಹೊರಟಿದ್ದ ಸುಶೀಲಾರಾಣಿ ಚಾರುನಾರಾಯಣರು ತಮ್ಮ ಬಲವನ್ನೆಲ್ಲಾ ಬಿಟ್ಟು ತಮ್ಮ ಪ್ರಾಣ–ಮಾನಗಳ ಭಯದಿಂದ ಓಡುತ್ತಿದ್ದರೂ ಅವರು ಬಹಳ ದೂರವೇನೂ ಹೋಗಲಾಗಿರಲಿಲ್ಲ. ತಮ್ಮ ಮನೆಯಿಂದ ಭಯಂಕರ ಅಗ್ನಿಜ್ವಾಲೆಯನ್ನು ಎದ್ದುದನ್ನು ಕಂಡರು. ಸಾಲಸೋಲ ಮಾಡಿ ಆರೇಳುವರ್ಷಗಳು ಕಷ್ಟಪಟ್ಟು, ಎಷ್ಟೆಷ್ಟೋ ಆಸೆಪಟ್ಟು ಕಟ್ಟಿದ ಮನೆ, ಹನ್ನೆರಡು ವರ್ಷಗಳು ಚೆನ್ನಾಗಿ ಬಾಳಿ ಬದುಕಿದ ಮನೆ, ಸುಶೀಲಾರಾಣಿ ಅತ್ಯಧಿಕ ಮೋಹವಿಟ್ಟುಕೊಂಡಿದ್ದ ಸುಂದರವಾಗಿ ಸಜ್ಜಿತವಾದ ಅಂದವಾದ ಮನೆ ಒಂದೆರಡು ಗಂಟೆಗಳೊಳಗಾಗಿ ಭಸ್ಮಾವಶೇಷವಾಗಿತ್ತು.

ಸುಶೀಲಾರಾಣಿಗೆ ದುಃಖ ಉಮ್ಮಳಿಸಿ ಬರುತ್ತಿತ್ತು. ಹೊಟ್ಟೆಯಲ್ಲಿ ಬೆಂಕಿ ಹೊತ್ತಿದ್ದಹಾಗಿತ್ತು. ಲಾಹೋರಿನ ಹೊರವಳಯವನ್ನು ಬಿಟ್ಟು ಹೊರಡಲು ಕಾಲೇಳವೊಲ್ಲದು. ಆದರೆ ಮತ್ತೊಂದು ಮತಾಂಧ ಧೂರ್ತರ ಗುಂಪು ಅವರನ್ನು ಬೆನ್ನಟ್ಟಿ ಬರುತ್ತಿತ್ತು. ಸೋತ ಕಾಲನ್ನೆಳೆದುಕೊಂಡು ಪ್ರಾಣಪಣದಿಂದ ಓಡಬೇಕಾಯಿತು. ಅನಂತರ ಅವರು ಭಾರತೀಯ ಸರಕಾರೀ ಅಧಿಕಾರಿಗಳ ಕೈಗೆ ಬಿದ್ದು ಕುರಿದೊಡ್ಡಿಯ ಹಾಗೆ ಜನರನ್ನು ಇಡಿಕಿದ್ದ ಗೈಲಿನಲ್ಲಿ ಮಿಲಿಟರೀ ಟ್ರಕ್ಕಿನಲ್ಲಿ ಹಿಂದೂಸ್ಥಾನಕ್ಕೆ ಬಂದದ್ದೊಂದು ದೊಡ್ಡ ಕತೆ.

ಡೆಹಲಿಯಲ್ಲಿ ಇತರ ನೂರಾರು ಶರಣಾರ್ಥಿಗಳ ಜೊತೆ ಇವರು ಬಂದು ಗುರುದ್ವಾರದಲ್ಲಿ ಆಶ್ರಯಪಡೆದಿದ್ದರು. ಎರಡು–ಮೂರು ತಿಂಗಳಕಾಲ ಸರಕಾರ ಈ ಶರಣಾರ್ಥಿಗಳಿಗೆ ಉಚಿತವಾಗಿ ಅನ್ನಬಟ್ಟೆಗಳನ್ನು ಹಂಚು ತ್ತಿತ್ತು. ಆದರೆ ಸರಕಾರವಾದರೂ ಹೇಗೆ ಲಕ್ಷಾವಧಿ ಜನರಿಗೆ ತಿಂಗಳಾನು ಗಟ್ಟಲೆ ಉಚಿತ ಅಶನ–ವಸನ–ವಸತಿ ಸೌಕರ್ಯಗಳನ್ನು ಒದಗಿಸೀತು?

ಸರಕಾರ ಉಚಿತವಾಗಿ ರೇಷನ್ ಪದಾರ್ಥಗಳನ್ನು ಕೊಡುವುದನ್ನು ನಿಲ್ಲಿಸಿತು. ಚಾರುನಾರಾಯಣನಿಗೆ ಎಲ್ಲಿಯೂ ಕೆಲಸ ಸಿಕ್ಕಿರಲಿಲ್ಲ. ಸುಶೀಲಾರಾಣಿ ಗೋಧಿಯ ರೊಟ್ಟೆಯಲ್ಲಿ ಅಡಗಿಸಿ ತಂದಿದ್ದ ಚಿನ್ನದ ಒಡವೆ ಗಳನ್ನು ಮಾರಿ ಕೆಲವುಕಾಲ ತಳ್ಳಿದ್ದಾಯಿತು. ಆದರೆ ಕುಳಿತು ಉಣ್ಣು ವವನಿಗೆ ಕುಡಿಕೆಯ ಹಣ ಸಾಲದೆಂಬಂತೆ ಅವೂ ಮಾಯವಾದುವು.

ಹೊಟ್ಟೆಯಲ್ಲಿ ಹಸಿವಿನ ಬೆಂಕಿ, ಹೃದಯದಲ್ಲಿ ದುಃಖದ ಬೆಂಕಿಯನ್ನು ಹೊತ್ತು ಇಡೀ ದಿನ ಗುರುದ್ವಾರದ ಮೂಲೆಯಲ್ಲಿ ಮುಸುಕುಹಾಕಿಕೊಂಡು ಕುಳಿತಿರುವುದು, ದಿನವಿಡೀ ಅಲೆದಾಡಿ ಸಂಜೆಗೆ ಪೆಚ್ಚುಮುಖ ಹಾಕಿ ಕೊಂಡು ಬಂದ ಗಂಡನ ಮುಖ ನೋಡುವುದು—ಇವು ಹೊರತು ಬೇರೆಯ ಕೆಲಸವಿರಲಿಲ್ಲ, ಅವಳಿಗೆ. ಕಾಳುಕಡ್ಡಿ ಇದ್ದರೆ ಅಡಿಗೆಯ ಕೆಲಸ. ಮನೆ ಯಿದ್ದರೆ ಮನೆಗೆಲಸ. ಈ ನಿರ್ವಾಸಿತರಿಗೆ ಕೆಲವು ದಿನ ದುಃಖಿಸುವು ದೊಂದೇ ಕೆಲಸವಾಗಿತ್ತು. ರೊಟ್ಟೆಯಿಲ್ಲ, ಬಟ್ಟೆಯಿಲ್ಲ, ಮಕ್ಕಳು ನವೆದು ಹೋಗುತ್ತಿವೆ. ಇನ್ನು ಸುಮ್ಮನಿರುವುದಾಗಲಿಲ್ಲ ಅವಳಿಗೆ.

ಶರಣಾರ್ಥಿ ಸ್ತ್ರೀಯರಿಗೋಸ್ಕರವಾಗಿಯೇ ನಿರ್ಮಿತವಾಗಿದ್ದ ನಾರೀ ನಿಕೇತನವನ್ನು ಸೇರಿದಳು. ಇಲ್ಲಿ ತರತರದ ಕಸೂತಿಯ ಕೆಲಸಗಳನ್ನು ಹೆಂಗಸರಿಂದ ಮಾಡಿಸಿ, ಆ ಕೆಲಸಕ್ಕೆ ಹೆಚ್ಚಿನ ಪ್ರತಿಫಲವನ್ನು ಕೊಡ ಲಾಗುತ್ತಿತ್ತು. ವ್ಯವಸ್ಥಾಪಕ ಸಮಿತಿಯವರೇನೋ ಈ ಸ್ತ್ರೀಯರಿಗೆ ಸ್ವಾವಲಂಬನ ಶಕ್ತಿಯನ್ನೂ, ಗೌರವಯುತ ಜೀವನವೃತ್ತಿಯನ್ನೂ ಕಲ್ಪಿಸಿ ಕೊಡಬೇಕೆಂದು ಹೆಣಗುತ್ತಿದ್ದರು. ಆದರೆ ನಾರೀನಿಕೇತನದಿಂದ ಸುಶೀಲಾ ರಾಣಿಗೆ ಹೆಚ್ಚಿನ ಸಹಾಯವೇನೂ ಆಗಲಿಲ್ಲ. ಕೆಲವು ದಿನ ಕೆಲಸ ಸಿಗುತ್ತಿತ್ತು. ಕೆಲವು ದಿನ ಕೆಲಸ ಸಿಗುತ್ತಿರಲಿಲ್ಲ. ಆ ದಿನ ಕೂಲಿಯೂ ದೊರಕುತ್ತಿರಲಿಲ್ಲ.

ಒಂದು ದಿನ ಒಬ್ಬ ಸ್ತ್ರೀ ಈಕೆ ಮಾಡುತ್ತಿದ್ದ ಕಸೂತಿಯ ಕೆಲಸವನ್ನು ಮೆಚ್ಚಿಕೊಂಡು, ತನ್ನ ಮನೆಗೆ ಬಂದರೆ ಹತ್ತಾರು ರೂಪಾಯಿಗಳ ಕೆಲಸವನ್ನು ಕೊಡುವುದಾಗಿ ಹೇಳಿದಳು.

ಒಂದು ನಿಟ್ಟುಸಿರು ಬಿಟ್ಟು ಸುಶೀಲಾರಾಣಿ ಆಕೆಯೊಡನೆ ಆಕೆಯ ಮನೆಗೆ ಹೋದಳು. ದಾರಿಯಲ್ಲಿ ಮತ್ತೆ ಮತ್ತೆ ತನ್ನ ದುರದೃಷ್ಟವನ್ನು ನೆನೆದು ದುಃಖ ಉಕ್ಕಿಬಂತು. "ಪಂಚಪಾಂಡವರರಸಿಯಾಗಿ, ಸಾಮ್ರಾಜ್ಞಿಯಾಗಿದ್ದ ದ್ರೌಪದಿ ವಿರಾಟರಾಯನ ಮನೆಯಲ್ಲಿ ಸೈರಂಧ್ರಿಯಾಗ ಬೇಕಾಯಿತು. ಇನ್ನು ನನ್ನಂಥ ಸಾಮಾನ್ಯರ ಪಾಡೇನು?" ಎಂದು ಸಮಾಧಾನ ತಂದುಕೊಂಡಳು. ಕಣ್ಣೀರನ್ನು ಒರೆಸಿಕೊಂಡಳು.

ಆ ಸ್ತ್ರೀ ಆಕೆಯನ್ನು ಹೊರಗಿನ ವರಾಂಡಾದಲ್ಲಿ ಒಂದು ಹಗ್ಗದ ಮಂಚದ ಮೇಲೆ ಕುಳ್ಳಿರಿಸಿ, ಬಟ್ಟೆಬರೆ ಕಸೂತಿಯ ದಾರಗಳನ್ನು ತರಲು ಒಳಹೊಕ್ಕಳು.

ಯಾರೋ ಅವಳ ಬಳಿಗೆ ಬಂದು ಪ್ರಶ್ನೆಗಳ ಸುರಿಮಳೆಗರೆಯ ತೊಡಗಿದ್ದರು—

"ಭಾಬೀಜೀ, ಭಾಬೀಜಿ, ಇದೇನು ನೀವಿಲ್ಲಿ? ಯಾವಾಗ ಬಂದಿರಿ? ನಿಮ್ಮನ್ನು ಯಾರು ಕರೆದುಕೊಂಡು ಬಂದರು? ನಿಮಗೆ ಮನೆ ಹೇಗೆ ಗೊತ್ತಾಯಿತು? ನಾವಿಲ್ಲಿದ್ದೇವೆಂದು ಯಾರು ಹೇಳಿದರು? ಅಣ್ಣಾವರು ಎಲ್ಲಿ? ಮಕ್ಕಳೆಲ್ಲಿ? ಹ್ಯಾಗಿದ್ದೀರಿ ನೀವು?"

ಸುಶೀಲಾರಾಣಿ ಆಶ್ಚರ್ಯದಿಂದ ತಲೆಯೆತ್ತಿ ನೋಡಿದಳು. ಅವಳ ಮೈದುನ ರಾಮಗೋಪಾಲ್! ಅವಳ ವಿಸ್ಮಯಕ್ಕೆ ಮೇರೆಯುಳಿಯಲಿಲ್ಲ.

ಅವನನ್ನು ಆಶೀರ್ವದಿಸುತ್ತಾ ಕೇಳಿದಳು—"ನೀನು ಹೇಗೆ ಇಲ್ಲಿದ್ದೀ? ನೀನು ಬೊಂಬಾಯಲ್ಲೀ ಇದ್ದೀಯೆಂದು ನಾವು ತಿಳಿದಿದ್ದೆವು.

ಅಷ್ಟರಲ್ಲಿ ರಾಮಗೋಪಾಲನ ಪತ್ನಿ ಹೊರಗೆ ಬಂದಳು. ತಾನು ಕೂಲಿಯ ಕೆಲಸಕ್ಕೆಂದು ಕರೆತಂದ ಹೆಂಗಸನ್ನುದ್ದೇಶಿಸಿ ಗಂಡ "ಇವರು ನನ್ನ ಭಾಬೀಜಿ ನಮಸ್ಕಾರ ಮಾಡು" ಎಂದು ಹೇಳಿದಾಗ ರುಕ್ಮಿಣಿಗೂ ಆಶ್ಚರ್ಯ.

ಮೈದುನನೊಡನೆ ಸಂಕ್ಷಿಪ್ತವಾಗಿ ತಮ್ಮ ಕರುಣ ಕತೆಯನ್ನು

ಹೇಳಿದಳು. ರಾಮಗೋಪಾಲ್ ಅಣ್ಣ ಅತ್ತಿಗೆಯರ ಕಷ್ಟದುಃಖಗಳನ್ನು ಕೇಳಿ ಮಗುವಿನಂತೆ ಅತ್ತುಬಿಟ್ಟನು. ಆ ಕ್ಷಣದಿಂದಲೇ ಅವರೆಲ್ಲಾ ಬಂದು ತಮ್ಮ ಮನೆಯಲ್ಲಿಯೇ ಇರುವಂತೆ ಅತ್ಯಂತ ಆದರ ಮತ್ತು ಒತ್ತಾಯ ಪೂರ್ವಕವಾಗಿ ಕರೆದನು.

ಮೈದುನ ಇದ್ದ ಮನೆ ಕಿಷ್ಕಿಂಧ. ಅವನ ಆರ್ಥಿಕಸ್ಥಿತಿಯೂ ಅಷ್ಟೇನೂ ಚೆನ್ನಾಗಿದ್ದಂತೆ ಕಾಣಲಿಲ್ಲ. ಸೆಕ್ರೆಟೇರಿಯೆಟ್ಟಿನಲ್ಲಿ ಕಾರಕೂನ ನಾಗಿದ್ದನವನು. ತಾವು ಬಂದು ಅವನಿಗೆ ಹೊರೆಯಾಗಿರುವುದು ಅವಳಿಗೆ ಇಷ್ಟವಾಗಲಿಲ್ಲ. ಆದರೆ ರಾಮಗೋಪಾಲ್ ಬಡಪೆಟ್ಟಿಗೆ ಬಿಡುವವನಾಗಿರ ಲಿಲ್ಲ. ಸುಶೀಲಾರಾಣಿಗೆ ಆ ಗಳಿಗೆಯಲ್ಲಿ ಉಂಟಾದ ಆತ್ಮಗ್ಲಾನಿಯನ್ನು ವರ್ಣಿಸಲಳವಲ್ಲ.

ಮೈದುನನ ಓದಿಗಿಂತ ತಮಗೆ ಮನೇಕಟ್ಟುವುದು ಪ್ರಧಾನವಾಗಿತ್ತು. ಚಾರುನಾರಾಯಣ ಹಣ ಕೊಡುವುದು ನಿಲ್ಲಿಸಿದ್ದರಿಂದ ರಾಮಗೋಪಾಲ ಕಾಲೇಜಿಗೆ ಶರಣುಹೊಡೆಯಬೇಕಾಯಿತು. ಅವನ ಭವಿಷ್ಯಜ್ಜೀವನದ ಸ್ವರ್ಣಸದನ ಮಣ್ಣುಗೂಡಿತ್ತು. ಬರೇ ಕಾರಕೂನನಾಗಿ ಬಡತನದಲ್ಲಿ ಒಡಲು ಹೊರೆಯಬೇಕಾಗಿತ್ತು. ಇಷ್ಟು ದೀರ್ಘ ಅವಧಿಯಲ್ಲಿ ತಾವು ಒಮ್ಮೆಯಾದರೂ ಅವನ ಸುಖದುಃಖವನ್ನು ವಿಚಾರಿಸಿರಲಿಲ್ಲ. ಅದೇ ರಾಮಗೋಪಾಲ್ ತನ್ನ ಮನೆಯಲ್ಲಿ ಬಂದಿರಲು ತನ್ನನ್ನು ಪ್ರಾರ್ಥಿಸು ತ್ತಿದ್ದಾನೆ. ಅಣ್ಣನಿಗೆ ಸಹಾಯಮಾಡಲು ಕಾತುರನಾಗಿದ್ದಾನೆ. ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಆ ರಾತ್ರಿ ಎಲ್ಲರೂ ಬೆಳದಿಂಗಳಲ್ಲಿ ಊಟಕ್ಕೆ ಕುಳಿತಿದ್ದರು. ರುಕ್ಮಿಣಿ ಬಡಿಸುತ್ತಿದ್ದಳು. ತಂಪಾದ ಬೆಳದಿಂಗಳಲ್ಲಿ ಬಡಿಸಿದ ತಟ್ಟೆಯ ಮುಂದೆ ಕುಳಿತ ಸುಶೀಲಾರಾಣಿಯ ಕಣ್ಣುಗಳಿಂದ ಬಿಸಿ ಬಿಸಿ ಕಂಬನಿಯ ಅವಿರಲ ಧಾರೆ ಹರಿಯುತ್ತಿತ್ತು. ಏಕೆ? ಗೂಂಡಾಗಳು ಎಗರಿಸಿಕೊಂಡು ಹೋದ ಮಗಳ ನೆನಪಾಯಿತೋ? ತಾವು ಅತ್ಯಂತ ಕಷ್ಟಪಟ್ಟು ಕಟ್ಟಿದ ಮನೆ ಉರಿಯುವ ಚಿತ್ರ ಬಗೆಗಣ್ಣಿಗೆ ಕಾಣಿಸಿತೋ? ಅವಳ ಮೋಹದ ಪರೆ ಕಂಬನಿಯೊಂದಿಗೆ ಕಳಚಿಬೀಳುತ್ತಿತ್ತೋ? ಅಥವಾ ಮೈದುನನ ಬಗ್ಗೆ ಅವಳ ಅಂತಃಕರಣ ಕರಗಿ ನೀರಾಗುತ್ತಿತ್ತೋ ಹೇಳಬಲ್ಲವರಾರು?

# ರಮಾ ಕಲಿತ ಪಾಠ

"ರಮಾ ನಿನಗೊಂದು ಸಂತೋಷದ ಸುದ್ದಿ ಹೇಳಲೇ?"

"ಏನು?"

ರಸಿಕನಾದ ತರುಣ ತನ್ನ ಪ್ರೇಯಸಿಗೆ ವಜ್ರಕೆಂಪಿನ ಪದಕವನ್ನು ಮೆಚ್ಚುಕೊಡುವ (ಒಪ್ಪಿಸುವ) ಠೀವಿಯಲ್ಲಿ ಎರಡು ಗುಲಾಬಿಯ ಬಣ್ಣದ ಕಾಗದದ ತುಂಡುಗಳನ್ನು ಸುರೇಶ ತನ್ನ ಜೇಬಿನಿಂದ ತೆಗೆದು ರಮೆಯ ಕೈಗೆ ಕೊಡುತ್ತಾ ಉತ್ಸಾಹದಿಂದ ಹೇಳಿದನು.

"ಇವತ್ತು ಏನೋ ಕೆಲಸದ ಮೇಲೆ ಸಾದರ್ ಬಜಾರ್‌ಗೆ ಹೋಗ ಬೇಕಾಯಿತು ನೋಡು. ಅಲ್ಲಿ ನನ್ನ ಗೆಳೆಯ ಮಾಧವ ಮೆನನ್ ಸಿಕ್ಕಿದ. ಒಬ್ಬರನ್ನೊಬ್ಬರು ನೋಡಿ ಎರಡು-ಮೂರು ವರ್ಷವಾಗಿತ್ತು. ಈ ಆಕಸ್ಮಿಕ ಭೇಟಿಯಿಂದ ಇಬ್ಬರಿಗೂ ತುಂಬಾ ಆನಂದವಾಯಿತು. ಆ ಗದ್ದಲದ ಬೀದಿಯಲ್ಲಿ, ಅಂಗಡಿಯ ಬದಿಯಲ್ಲೇ ನಿಂತು ಅದೆಷ್ಟೋ ಹೊತ್ತು ಮಾತುಕತೆಯಾಡಿದೆವು. ನಾಳೆ ನಾಡಿದ್ದರಲ್ಲಿ ಮನೆಗೆ ಊಟಕ್ಕೋ, ತಿಂಡಿಗೋ ಬರುವಂತೆ ಕರೆಯೋಣ ಅಂತ ಮನಸ್ಸಾಯಿತು. ಆದರೆ ನೋಡು ತಿಂಗಳ ಕಡೆ. ಕೈಯಲ್ಲಿ ಒಂದು ರೂಪಾಯಿ ಸಹಾ ಇಲ್ಲ. ಬರೀ ಎರಡಾಣೆಯ ಟೀಯೊಳಗೆ ಆಪ್ತಗೆಳೆಯನ ಮೇಜವಾನಿ ಮುಗಿಸ ಬೇಕಾಯಿತು ನೋಡು.

"ನನಗೆ ನಾಳೆ ಈ ನಾಟಕಕ್ಕೆ ಹೋಗುವುದಕ್ಕಾಗುವುದಿಲ್ಲ. ನೀವು ಗಂಡಹೆಂಡತಿ ಬೇಕಾದರೆ ಹೋಗಿಬನ್ನಿ ಅಂತ ಹತ್ತ ತ್ತುರೂಪಾಯಿನ ಎರಡು ಕಾಂಪ್ಲಿಮೆಂಟರಿ ಪಾಸು ಕೊಟ್ಟ. ನಾಳೆಯೇ ಅವನು ಗುಜರಾಥಿಗೆ ಹೊರಟುಹೋಗುತ್ತಾನಂತೆ. ಅವನಿಗೇನು ಹೇಳು, ಪುಣ್ಯಪುರುಷ. ಸಿನಿಮಾ, ನಾಟಕ, ಸಂಗೀತಕಛೇರಿ, ಪಾರ್ಟಿ, ಗೀರ್ಟಿ ಎಲ್ಲಾ ಸರ್ವೇ ಸಾಮಾನ್ಯ. ಅವನಿಗೆ ಬರೋ ಕಾಂಪ್ಲಿಮೆಂಟರಿ ಪಾಸುಗಳಿಗೆ ಲೆಕ್ಕವೇ ಇಲ್ಲ. ಈ ಎರಡು ಟಿಕೆಟ್ಸ್ ಕೊಟ್ಟು ನಮ್ಮಮೇಲೆ ಎಂಥಾ ಉಪಕಾರದ

ಹೊರೆ ಹೊರಸಿದಾಂತ ಪಾಪ! ಅವನಿಗೇನು ಗೊತ್ತು. ನನ್ನ ಹೃದಯದಲ್ಲಿ ಎಂಥಾ ಸಂತೋಷದ ಹೊಳೆ ಹರಿಸಿದಾ.

"ನಾಳೆ ೫ ಗಂಟೆಗೇ ನೀನು ತಯಾರಿರಬೇಕು. ನಾನು ಆಫೀಸಿನಿಂದ ಬಂದ ತಕ್ಷಣ ನೀನು ಹೊರಡಬೇಕು."

ಆ ಗುಲಾಬೀ ಬಣ್ಣದ ಕಾಗದದ ತುಂಡುಗಳನ್ನು ನೋಡಿದ ಮೊದಲ ಗಳಿಗೆಯಲ್ಲೇನೋ ಅವಳ ಮುಖ ಗುಲಾಬೀ ಹೂವಿನ ಹಾಗೆ ಅರಳಿ ಹೋಗಿತ್ತು. ಆದರೆ ಗಂಡ ಉತ್ಸಾಹದಲ್ಲಿ ಮಾತನಾಡುತ್ತಿದ್ದಂತೆಯೇ ಏನೋ ಯೋಚನೆಯಲ್ಲಿ ಅವಳ ಮುಖ ಬಾಡಿಹೋಗಿತ್ತು.

"ಯಾಕೆ ಚಿನ್ನಾ, ಮಾತಾಡಲೊಲ್ಲೆ? ಮೈಯಲ್ಲಿ ಹುಷಾರಿಲ್ಲವೇ?" ಕಾತರನಾಗಿ ಕೇಳಿದ ಸುರೇಶ.

"ಮೈಯಲ್ಲಿ ಸರಿಯಾಗಿಲ್ಲದೇ ಏನು? ನಾನೆಲ್ಲಿ ಬರುವುದಕ್ಕಾಗುತ್ತೆ ನಾಟಕಕ್ಕೆ?"

"ಯಾಕೆ?"

"ಮಕ್ಕಳನ್ನು ಬಿಟ್ಟು........"

"ಈ ಮನೇಲಿ ನೀನು ಒಬ್ಬಂಟಿಗಳಾಗಿರೋ ಹಾಗೆ ಮಾತಾಡ ತೀಯಲ್ಲ? ಅಮ್ಮ ನೋಡಿಕೊಳ್ತಾರೆ. ಬೇಕಾದರೆ ನಾನೇ ಅವರಿಗೆ ಹೇಳುತ್ತೇನೆ."

"ಉಹ್ಹುಂ ಅದಕ್ಕಲ್ಲಾಂದ್ರೆ. ನೀವು ಹೋಗಿದ್ದು ಬನ್ನಿ. ಬೇಕಾದರೆ ಸುರಮಾನೂ ಕರೆದುಕೊಂಡು ಹೋಗಿ."

"ರಮಾ, ನಾಳೆ ನೀನು ಬರಲೇಬೇಕು. ನೀನು ಬರದಿದ್ದರೆ ನಾನೂ ಹೋಗೋಲ್ಲ. ಜೊತೆಯಲ್ಲಿ ನೀನಿಲ್ಲದೆ ನಾಟಕ ನೋಡಿದರೆ ಒಂದೇ ಕಣ್ಣಲ್ಲಿ ನೋಡಿದ ಹಾಗೆ ಆಗುತ್ತೆ."

ಗಂಡನ ಆ ಕಾತರ, ಪ್ರೇಮೋತ್ಸಾಹಗಳನ್ನು ನೋಡಿ ಅವಳಿಗೆ ಹೇಗೆ ಹೇಗೋ ಆಯಿತು. ಕಣ್ಣು ಹನಿಗೂಡಿತ್ತು. ದುಃಖಿತಳಾಗಿ ಅರೆಮನಸ್ಸಿನಿಂದ ಹೇಳಿದಳು.

"ಹೊರಗೆ ಹೋಗೋಕೆ ನನಗೆ ಒಂದಾದರೂ ಒಳ್ಳೆಯ ಸೀರೆ ಯಿಲ್ಲ····ಸುಮ್ಮನೆ ನೀವು ಹೋಗಿ····ನನ್ನನ್ನು ಕಾಡಬೇಡಿ."

ಅವಳ ಮಾತನ್ನು ಕೇಳಿ ಸುರೇಶ್ ಒಂದು ಕ್ಷಣ ಅವಾಕ್ಕಾದನು. ಅವನ ಗಮನ ಅವಳ ಮಾಸಿದ ಹರಿದ ಸೀರೆಯ ಕಡೆಗೆ ಹೋಗಿ "ಈ ಚಿನ್ನದ ಪುತ್ಥಳಿಗೆ ಒಂದಾದರೂ ಚೆಲುವಾದ ಸೀರೆಯನ್ನು ತೆಗೆದು ಕೊಡುವುದಕ್ಕೆ ನನ್ನಿಂದ ಆಗಿಲ್ಲವಲ್ಲಾ" ಎಂದು ವ್ಯಥಿತನಾದನು. ಆದರೂ ನಗುತ್ತಲೇ ಹೇಳಿದನು. "ನೀನು ಯಾವ ಸೀರೆ ಉಟ್ಟರೂ ಚೆನ್ನಾಗಿಯೇ ಕಾಣುತ್ತೀ ರಮಾ. ಇಷ್ಟಕ್ಕೂ ನಾವು ಹೋಗೋದು ನಾಟಕ ನೋಡೋಕ್ಕೋ, ಇಲ್ಲಾ ನಮ್ಮ ಒಟ್ಟೆಬರೇ ಪ್ರದರ್ಶಿಸೋಕ್ಕೋ?"

"ಅಯ್ಯೋ, ನಿಮಗೇನು ತಿಳಿಯುತ್ತೇಂದ್ರೆ ಗಂಡಸರಿಗೆ ಇವೆಲ್ಲಾ. ನೀವೇನು ಕಾಕಿ ಷರಾಯಿ, ಬಿಳೀ ಷರಟು ಹಾಕಿಕೊಂಡು ಇದ್ದಿಲಂಗಡಿ, ರೇಷನ್ ಅಂಗಡಿಯಿಂದ ಹಿಡಿದು ಮಂತ್ರಿಗಳ ಸತ್ಕಾರಕೂಟದವರೆಗೆ ಎಲ್ಲಿಗೆ ಬೇಕಾದರೂ ಹೋಗಿ ಬರುತ್ತೀರಿ. ನಮಗೆ ಹೆಂಗಸರಿಗೆ ಹಾಗೆ ಆಗುತ್ಯೇ? ನಾನು ಈ ಜೂಲು ಜೂಲು ನೂಲ ಸೀರೆ ಉಟ್ಟುಕೊಂಡು ಹತ್ತು ರೂಪಾಯಿನ ಸೀಟ್ನಲ್ಲಿ ಕುಳಿತಿದ್ದರೆ, ಸುತ್ತಮುತ್ತ ಇರೋ ಹೆಂಗಸರೆಲ್ಲಾ, ಇವಳು ಯಾವೋಳೋ ಒಂದು ರೂಪಾಯಿನ ಸೀಟಿನೋಳು ತಪ್ಪಿ ಇಲ್ಲಿಗೆ ಬಂದುಬಿಟ್ಟಿದಾಳೇಂತ ನನ್ನೇ ನೋಡ್ತಾರೆ. ನಾಟಕದೊಳಗೊಂದು ನಾಟಕ ಆಗುತ್ತೆ ಅಷ್ಟೆ. ಸುಮ್ಮನೆ ಯಾಕೆ ಮಾತು ಬೆಳೆಸಿಕೊಂಡು ಹೋಗಬೇಕು? ನೀವು ನೋಡಿ ಸಂತೋಷಪಟ್ಟರೆ ನಾನೂ ನೋಡಿದ ಹಾಗೇ ಆಯಿತು. ನನಗೆ ಅಷ್ಟೇ ತೃಪ್ತಿ. ಜೊತೆಗೆ ಸುರಮಾನೂ ಕರೆದುಕೊಂಡು ಹೋಗಿ."

"ಮದುವೆಯಾಗಿ ಹತ್ತುವರ್ಷವಾಯಿತು. ಒಡವೆ, ವಸ್ತ್ರ ಹಾಗಿರಲಿ, ಒಂದಾದರೂ ಒಳ್ಳೆಯ ಸೀರೆ ತೆಗೆದುಕೊಟ್ಟಿಲ್ಲ. ನಾಲ್ಕು ಜನರೆದುರಿಗೆ ತಿರುಗುವ ಹಾಗೆ ಸಹ ಇಲ್ಲ" ಎಂದು ಅವಳು ಬಾಯಿ ಬಿಟ್ಟು ಹೇಳಬೇಕಾಗಿಯೇ ಇರಲಿಲ್ಲ. ಅವಳ ಬಾಡಿದ ಮುಖವೇ ಅವನ ಕರುಳನ್ನು ಹಿಂಡುವುದಕ್ಕೆ ಸಾಕಾಗಿತ್ತು. ಮನಸ್ಸಿನಲ್ಲಿ ಏನನ್ನೋ ಯೋಚಿಸಿ ಕೊಂಡು—"ಇರಲಿ, ನಾಳೆಯುವರೆಗೆ ಟೈಮ್ ಇದೆಯಲ್ಲ. ನೋಡೋಣ" ಎಂದು ಹೇಳಿದನು.

ರಮಾ ಮನೆಗೆಲಸದಲ್ಲಿ ತೊಡಗಿ ನಾಟಕದ ವಿಷಯವನ್ನು ಮರೆಯ ಲೆತ್ನಿಸಿದಳು. ಅವಳು ಎಷ್ಟು ಮರೆಯಲೆತ್ನಿಸಿದರೂ, "ಈ ಜನ್ಮದಲ್ಲಿ ಬೇರೇ

ನಾವು ಅಷ್ಟು ಹಣ ವೆಚ್ಚಮಾಡಿ ನಾಟಕ ನೋಡುವಂತಿಲ್ಲ. ಯಾರೋ ಪುಣ್ಯಾತ್ಮರು ಪಾಸುಕೊಟ್ಟರೂ ಹೊರಗೆ ಹೋಗುವುದಕ್ಕೆ ಒಂದು ಸರಿಯಾದ ಸೀರೆ, ರೌಕೆ ಇಲ್ಲದೆ 'ಕೈಗೆ ಬಂದ ತುತ್ತು ಬಾಯಿಗಿಲ್ಲ' ಎನ್ನುವಂತೆ ನಾಟಕಕ್ಕೆ ಹೋಗುವುದು ತಪ್ಪಿತಲ್ಲ. ಹಣವಿದ್ದ ಗಂಡನನ್ನು ಮದುವೆಯಾದರೂ ಅನುಭವಿಸೋಕೆ ಋಣ ಇರಬೇಕು" ಎನ್ನುವ ಪರಿತಾಪ ತಪ್ಪಲಿಲ್ಲ.

* * *

ಮಾರನೆಯದಿನ ಸಂಜೆ ಸುರೇಶ ನಾಲ್ಕುಗಂಟೆಗೇ ಮನೆಗೆ ಬಂದನು. ರಮೆಗೆ ಆಶ್ಚರ್ಯವಾಯಿತು. ಟೀ ಕೊಡುತ್ತಾ ಗಂಡನನ್ನು ಕೇಳಿದಳು—"ಇದೇನು, ಇವತ್ತು ಇಷ್ಟು ಬೇಗ ಬಂದಿರಿ?"

"ನಾಟಕಕ್ಕೆ ಹೋಗೋಕೆ, ರಾಣೀಸಾಹೇಬರನ್ನ ತಯಾರು ಮಾಡೋಕೆ?"

"ನಿನ್ನೆಯೇ ಹೇಳಲಿಲ್ಲವೇ ನಾನು ಬರೋಕ್ಕಾಗೋಲ್ಲಾಂತ."

"ರಮಾ ನಿನಗಾಗಿ ನಾನೇನು ತಂದಿದೇನೆ, ನೋಡಿ ಆಮೇಲೆ ಮಾತಾಡು" ಎನ್ನುತ್ತಾ ಅವಳ ಕೈಗೊಂದು ಕಾಗದದ ಪೊಟ್ಟಣವನ್ನು ಕೊಟ್ಟನು.

ರಮಾ ಕುತೂಹಲದಿಂದ ಅದನ್ನು ಬಿಚ್ಚಿ ನೋಡಿದಳು. ಒಳಗೆ ಅಂದವಾದ ಗುಲಾಬಿಯ ಬಣ್ಣದ ಸಿಲ್ಕ್ ಸೀರೆ, ಮತ್ತು ಅದಕ್ಕೊಪ್ಪುವ ಆಕಾಶವರ್ಣದ ಸ್ಯಾಟಿನ್ ಬ್ಲೌಜು. ಆಶ್ಚರ್ಯ, ಸಂತೋಷಗಳಿಂದ ರಮೆಯ ಕಣ್ಣು ಅರಳಿಹೋಯಿತು. ಇದು ತನಗೇಯೇ ಎಂದು ಕೇಳುವಂತೆ ಗಂಡನನ್ನೊಮ್ಮೆ ನೋಡಿದಳು. ಆ ನೋಟದಲ್ಲಿಯೇ ಸೀರೆ ಮತ್ತು ರೌಕೆಗಳ ಬಗ್ಗೆ ಮೆಚ್ಚುಗೆಯೂ ವ್ಯಕ್ತವಾಗಿತ್ತು.

"ಇದು ಹೇಗೆ ತಂದಿರಿ? ದುಡ್ಡು ತಾನೇ ಎಲ್ಲಿತ್ತು?"

"ರಮಾ, ನನ್ನ ಕೈಹಿಡಿದು ನೀನು ಸುಖ ಪಡಲಿಲ್ಲ. ಈ ಹತ್ತು ವರ್ಷದಲ್ಲಿ ಒಂದು ಒಳ್ಳೆಯ ಸೀರೆ ಸಹ ತಂದುಕೊಡಲಿಲ್ಲ. ನಿನ್ನನ್ನು ಒಂದು ದಿನವಾದರೂ ಸಂತೋಷಪಡಿಸೋಣಾಂತ.... ನನ್ನ ಸ್ನೇಹಿತನ

ಹತ್ತಿರ ೩೫ ರೂಪಾಯಿ ಸಾಲಮಾಡಿ ಈ ಸೀರೆ, ರೌಕೆ ಕೊಂಡುಕೊಂಡು ಬಂದೆ. ಚುನಾಯಿಸೋಕೆ ನಿನ್ನೂ ಕರೆದುಕೊಂಡು ಹೋಗೋಣಾಂತ ಇದ್ದೆ. ಅವಕಾಶವಾಗಲಿಲ್ಲ. ಈ ಸೀರೆ ರೌಕೆ ನಿನಗೆ ಒಪ್ಪಿಗೆಯಾಯಿತೇ ಹೇಳು ?"

ಗಂಡನನ್ನು ಕನಿಕರದಿಂದ ನೋಡುತ್ತಾ ಹೇಳಿದಳು ರಮಾ— "ಅಯ್ಯೋ....ಸಾಲಮಾಡಿಯಾದರೂ ತರದಿದ್ದರೆ ಏನು ಮುಳುಗಿ ಹೋಗುತ್ತಿತ್ತೂ ಅಂದರೆ, ಇನ್ನು ಆ ಸಾಲಾ ತೀರಿಸುವ ಬಗೆ ಹೇಗೆ? ನೀವು ನನ್ನ ಕಣ್ಣೆದುರಿಗೆ ಸಂತೋಷವಾಗಿ ಸುಖವಾಗಿ ಇದ್ದುಬಿಟ್ಟರೆ ಅದೇ ನನಗೆ ಎಲ್ಲಾ ಒಡವೆ ವಸ್ತುಗಳಿಗಿಂತಲೂ ಹೆಚ್ಚು."

"ಮುತ್ತಿನಂಥ ಮಾತು ಆಡಿದೆ ರಮಾ. ಆದರೆ ನನಗೆ ಹೇಗಾದರೂ ಮಾಡಿ ನಿನ್ನನ್ನು ನಾಟಕಕ್ಕೆ ಕರೆದುಕೊಂಡು ಹೋಗಬೇಕೂಂತ ತುಂಬಾ ಆಸೆಯಿತ್ತು. ನಾಲ್ಕೆಂಟುದಿನ overtime ಮಾಡಿದರೆ ಸಾಲದ ಹಣ ತೀರಿಹೋಗುತ್ತೆ. ನೀನೇನೂ ಯೋಚಿಸಬೇಡ....ಹ್ಞೂಂ. ನೀನು ಇನ್ನಾದರೂ ಹೊರಡುತ್ತೀಯೋ ಇಲ್ಲವೋ ?

"ಅಯ್ಯೋ! ದೇವರೇ. ನೀವು ಈಗ ಮಾಡುತ್ತಾ ಇರುವ ಕೆಲಸ ಸಾಲದೇ? ಇನ್ನು overtime ಬೇರೇ ಮಾಡಿದರೆ ನಿಮ್ಮ ದೇಹದ ಗತಿ ಏನಾಗಬೇಕು ?"

ತನ್ನ ಹನಿಗಣ್ಣು ಗಂಡನಿಗೆ ಕಾಣದಿರಲೆಂದು ಅವಳು ಬೇರೇ ಕಡೆಗೆ ಮುಖವನ್ನು ತಿರುಗಿಸಿಕೊಂಡಳು. ಮನುಷ್ಯನ ಬಾಳೇ ಇಷ್ಟು. ಮನುಷ್ಯ ಏನನ್ನಾದರೂ ಕುರಿತು ಅತ್ಯಧಿಕವಾಗಿ ಹಂಬಲಿಸುತ್ತಾನೆ. ಆದರೆ ಅದು ದೊರೆತಾಗ ಸಹ ಅವನಿಗೆ ಪೂರ್ಣವಾದ ತೃಪ್ತಿಯುಂಟಾಗುವುದಿಲ್ಲ. ಜೊತೆಯಲ್ಲೇ ಏನಾದರೊಂದು ಅರೆಕೊರೆ ಮನಸ್ಸನ್ನು ಕುಟುಕುತ್ತಲೇ ಇರುತ್ತದೆ.

ಅಂದವಾದ ಸೀರೆ, ರೌಕೆ ದೊರೆತ ಸಂತೋಷವನ್ನು ಗಂಡನಿಗೆ ಇಷ್ಟು ಕಷ್ಟವಾಗುತ್ತಲ್ಲಾ ಎನ್ನುವ ಯೋಚನೆ ಮರೆಸಿಬಿಟ್ಟಿತ್ತು.

ರಮಾ ಆ ಗುಲಾಬಿಬಣ್ಣದ ಸೀರೆಯುಟ್ಟು, ಮಿರುಮಿರುಗುವ ಸ್ಯಾಟಿನ್‌ಬ್ಲೌಸ್ ತೊಟ್ಟು, ನೀಳವಾದ ಜಡೆಯಲ್ಲಿ ಒಂದೇ ಒಂದು ಗುಲಾಬೀಹೂವನ್ನು ನಾಲ್ಕೈದು ಚಿಗುರೆಲೆಗಳ ಸಹಿತ ಮುಡಿದು, ಹಾಲು

ಕೆನೆಯಂಥ ಬಿಳುಪಾದ ಹಣೆಯ ನಡುವೆ ನಕ್ಷತ್ರದ ಹಾಗೆ ಕುಂಕುಮ ವಿಟ್ಟುಕೊಂಡು, ನಾಟಕಕ್ಕೆ ಹೋಗಲು ಅಣಿಯಾಗಿ ಹೊರಗೆ ಬಂದಾಗ ಸಂಜೆಯ ಕೆಂಬೆಳಕು ಅವಳ ಮೈಮೇಲೆಬಿದ್ದು ಅವಳ ಚೆಲುವು ನೂರ್ಮಡಿ ಸಿತು. ಸುರೇಶನಿಗೆ ಪ್ರೇಯಸಿಯನ್ನು ನೋಡಿ ತುಂಬಾ ಅಭಿಮಾನ ವೆನಿಸಿತು. ಈ ಚೆಲುವೆಯನ್ನು ಸುಖವಾಗಿಟ್ಟುಕೊಳ್ಳಲು, ಇವಳ ನಗೆ ಮಿಂಚನ್ನು ಕಾಣಲು ಹಗಲು ಹನ್ನೆರಡುತಾಸು ಬೇಕಾದರೂ ದುಡಿದೇನು ಎನ್ನಿಸಿತು.

ಇವರಿಬ್ಬರೂ ನಾಟಕಕ್ಕೆ ಹೋದರು. ಮನೆಮಂದಿಯೆಲ್ಲಾ ದೇವ ಸ್ಥಾನಕ್ಕೆ ಹೋದರು.

ನಾಟಕಮಂದಿರದ ಮುಂದೆ ಅವರು ಟಾಂಗಾದಿಂದ ಇಳಿಯುವ ಹೊತ್ತಿಗೆ ಸರಿಯಾಗಿ ಅವರ ಮಗ್ಗಲುಮನೆ ಭಾಗೂಬಾಯಿ ಮತ್ತು ಅವರ ಗಂಡ ಕಾರಿನಿಂದ ಇಳಿದರು. ಅದರಲ್ಲಿ ಇವರ ಪಕ್ಕದಲ್ಲೇ ಆ ದಂಪತಿ ಗಳೂ ಕುಳಿತರು. ಮೊದಲು ಭಾಗೂಬಾಯಿ ರಮೆಯನ್ನು ಗುರ್ತಿಸಲಿಲ್ಲ. ಭಾಗೂಬಾಯಿಗೆ ತಮ್ಮ ಮಗ್ಗುಲಲ್ಲೇ ಕುಳಿತಿದ್ದ ರಮೆಯನ್ನು ಕಂಡು ಆದ ಆಶ್ಚರ್ಯ ಅಷ್ಟಿಷ್ಟಲ್ಲ. ಆಕೆ ಲೋಕಾರೂಢಿಯಾಗಿ ನಾಲ್ಕುಮಾತಾಡಿದರು. ರಮೆ ಹೌದು, ಅಲ್ಲ, ಇಲ್ಲ ಇಷ್ಟರಲ್ಲೇ ಮಾತುಮುಗಿಸಿದಳು.

ಗಂಡಹೆಂಡಿರಿಬ್ಬರೂ ಕೂಡಿಯೇ ನಾಟಕಕ್ಕೆ ಹೋದರೂ ನಿಜವಾಗಿ ನಾಟಕವನ್ನು ನೋಡಿ ಆನಂದಪಟ್ಟವನು ಸುರೇಶನೊಬ್ಬನೇ. ನಾಗರೀ ಕತೆಯ ಸಕಲ ಸಲಕರಣೆಗಳಿಂದ ಕೂಡಿ ವೈಭವಯುಕ್ತವಾದ ಆ ವಿಶಾಲ ವಾದ ನಾಟಕಶಾಲೆಯಲ್ಲಿ, ನೂರಾರು ತರಹೆಯ ಬೆಲೆ ಬಾಳುವ ವೇಷ ಭೂಷಣಗಳಿಂದ ಅಲಂಕೃತರಾದ ಆ ಸಿರಿವಂತ ಜನಸಮೂಹದ ಮಧ್ಯೆ ರಮೆ ಏಕಾಕಿಯಾಗಿಯೇ ಉಳಿದಳು.

ಕಣ್ಣಮುಂದೆ ಸುಸಜ್ಜಿತವಾದ ರಂಗಮಂಚದ ಮೇಲೆ ವಿದ್ಯುದ್ದೀಪ ಗಳ ಉಜ್ವಲಪ್ರಭೆಯಲ್ಲಿ ಸಾಗಿತ್ತು, ಯಾವ ಕವಿಯೋ ಬರೆದ ನವರಸ ಭರಿತ ಕಾಲ್ಪನಿಕ ನಾಟಕ. ಬಣ್ಣಬಣ್ಣದುಡಿಗೆತೊಡಿಗೆಗಳನ್ನುಟ್ಟ ಯಾರು ಯಾರೋ ನಟನಟಿಯರು ಬಂದು ಆಡಿ, ಹಾಡಿ, ಮಾತಾಡಿ ಕುಣಿದು ಹೋದರು.

ಬಡಪಾಯಿ ರಮೆಯ ಮನೋರಂಗದ ಮೇಲೆ ಚಲನಚಿತ್ರದಂತೆ ಸಾಗಿತ್ತು ಅವಳವೇ ಜೀವನನಾಟಕ. ಅಲ್ಲಿತ್ತು ದುಃಖದ ಕತ್ತಲು, ದುರ್ಭರ ಸಂತಾಪದ ಕಣ್ಣೀರು, ಕಾರ್ಪಣ್ಯದ ಅಭಿಶಾಪ····

* * *

ತೀರ ಬಡತನದಲ್ಲಿ ಹುಟ್ಟಿಬೆಳೆದ ಹುಡುಗಿಯವಳು. ಬಾಯಿಗೆ ಬೇಕಾದಂಥ ಉಣಿಸು ತಿನಸು, ಕಣ್ಣಿಗೆ ಸೊಗಸುವ ಬಟ್ಟೆಬರೆ ಹಾಗಿರಲಿ ಹೊಟ್ಟೆತುಂಬ ಊಟ ಸಿಕ್ಕಿದ ದಿನ ಹಬ್ಬವೆನಿಸುತ್ತಿತ್ತು. ವಿದ್ಯೆಕಲೆಗಳನ್ನು ಕಲಿಯಬೇಕೆಂದು ಆಸೆಯಿತ್ತು. ಸುಖವಾಗಿ ಬಾಳಬೇಕೆಂಬ ಆಸೆಯಿತ್ತು. ಜೀವನದ ಒಳ್ಳೆಯ ವಸ್ತುಗಳು ಏನೆಲ್ಲ ಉಂಟೋ ಅವು ಯಾರಿಗೆ ಬೇಡ?

ಸ್ಕೂಲಿಗೆ ಒಂದೆರಡು ಫರ್ಲಾಂಗ್ ದೂರವಲ್ಲಿ ಮನೆಗಳಿದ್ದ ಅವಳ ಓರಗೆಯ ಗೆಳತಿಯರು ಕಾರುಗಳಲ್ಲಿ, ಟಾಂಗಾ, ಬಸ್ಸುಗಳಲ್ಲಿ ಬರುತ್ತಿದ್ದಾಗ ಆ ಬಡಪಾಯಿ ಮೂರು ಮೈಲಿ ನಡೆದು ಹೋಗಬೇಕಾಗಿತ್ತು. ಫ್ರೀಷಿಪ್ ದೊರಕಿತ್ತು. ಆದರೆ ಪುಸ್ತಕ ಮತ್ತು ಇತರ ಕೆಲವು ಅನಿವಾರ್ಯ ಅವಶ್ಯಕತೆಗಳ ಸಲುವಾಗಿ ಕೂಲಿಗೆ ಕಸೂತಿಕೆಲಸ ಮಾಡಿಕೊಡುತ್ತಿದ್ದಳು. ಅವಳ ಓರಗೆಯ ಗೆಳತಿಯರು, ಸುಪ್ಪತ್ತಿಗೆಯ ಮೇಲೆ ಮಲಗಿ ಸುಖವಾಗಿ ನಿದ್ರಿಸುವ ತಂಪಾದ ಇರುಳುಹೊತ್ತು, ಎಣ್ಣೆಯದೀಪದ ಮಣಕು ಬೆಳಕಿನಲ್ಲಿ ಅವಳ ಎಳೆಯ ಕಣ್ಣುಗಳು, ಕೋಮಲವಾದ ಆದರೆ ಪಟುವಾದ ತಳಿರಿನಂಥ ಬೆರಳುಗಳು ಕಸೂತಿಕೆಲಸಮಾಡುತ್ತಿದ್ದುವು.

ರಮಾ ಹಣವಂತ ಗಂಡನನ್ನು ಮದುವೆಯಾಗಿ ಸುಖವಾಗಿರುವ ದಿನಗಳನ್ನು ಎದುರುನೋಡುತ್ತಿದ್ದಳು. ಆ ಹೊಂಗನಸಿನ ಆಧಾರದಿಂದಲೇ ತನ್ನ ಕಷ್ಟಕಾರ್ಪಣ್ಯಗಳನ್ನು ಮರೆಯಲೆತ್ನಿಸುತ್ತಿದ್ದಳು.

ರಮೆಯ ತಾಯ್ತಂದೆಗಳು ಬಡವರಾದರೂ ರಮಾ ರೂಪದಲ್ಲಿ ರತಿಯಾಗಿ, ತಕ್ಕಮಟ್ಟಿಗೆ ಬುದ್ಧಿವಂತೆಯಾಗಿದ್ದುದರಿಂದ ಅವಳಿಗೆ ಒಳ್ಳೆಯ ವರ ಸಿಕ್ಕುವುದು ಕಷ್ಟವಾದರೂ ಅಸಂಭವವೇನೂ ಆಗಿರಲಿಲ್ಲ.

ಸುರೇಶ ಅವಳನ್ನು ನೋಡಲು ಬಂದಾಗ ಅವನಿಗೆ ಯಾವುದೋ ಕಂಪೆನಿಯಲ್ಲಿ ೬೦೦ ರೂಪಾಯಿನ ಕೆಲಸವಿದೆಯೆಂದು ಕೇಳಿ ರಮಾಬಾಯಿ

ಬಾಯಿಬಿಟ್ಟಳು. ರಮೆಯ ರೂಪಲಾವಣ್ಯಗಳಿಗೆ ಮರುಳಾದ ಸುರೇಶ ವರದಕ್ಷಿಣೆ, ವರೋಪಚಾರಗಳ ಹೆಸರೆತ್ತದೆ ಮದುವೆಯಾಗಲೊಪ್ಪಿ ದುದನ್ನು ಕಂಡು ರಮೆಯ ತಾಯ್ತಂದೆಗಳು ಕುಣಿದಾಡಿಬಿಟ್ಟರು. ರಮೆ ಯಂತೂ ವರನನ್ನು ಕಣ್ಣೆತ್ತಿಸಹ ನೋಡದೆ ಮದುವೆಗೆ ಒಪ್ಪಿಬಿಟ್ಟಳು.

ಗಂಡನಮನೆಗೆ ಬಂದ ನಾಲ್ಕೇದಿನಗಳಲ್ಲಿ ರಮೆಗೆ ತಾನು ಮೋಸ ಹೋಗಿದ್ದು ಗೊತ್ತಾಯಿತು. ಗಂಡಿಗೇ ಆಗಲಿ, ಗಂಡಿನ ಕಡೆಯವರಿಗೇ ಆಗಲಿ ಮೋಸಮಾಡಬೇಕೆಂಬ ಉದ್ದೇಶ ಕನಸುಮನಸಿನಲ್ಲಿಯೂ ಇರಲಿಲ್ಲ. ಅವನಿಗೆ ೬೦೦ ರೂ. ಸಂಬಳ ಬರುತ್ತಿದ್ದುದೂ ನಿಜವೇ; ಆದರೆ ಸುರೇಶನ ಮನೆಯಲ್ಲಿ ಇದ್ದುದು ಹತ್ತುಜನ. ಅವನ ತಮ್ಮನಿಗೇನೋ ಹೆಸರಿಗೆ ಎಪ್ಪತ್ತುರೂಪಾಯಿನ ಸಂಪಾದನೆಯಿತ್ತು. ಆದರೂ ಒಟ್ಟಿನಲ್ಲಿ ಸಂಸಾರ ಸಾಗಬೇಕಾಗಿದ್ದುದು ಸುರೇಶನ ಸಂಪಾದನೆಯಿಂದಲೇ. ಅಲ್ಲದೆ ಅವನ ಸೋದರಮಾವನ ಇಬ್ಬರು ತಬ್ಬಲಿಮಕ್ಕಳನ್ನೂ ಇವನೇ ಸಾಕಬೇಕಾಗಿತ್ತು. ಡೆಲ್ಲಿಯಂಥ ದೊಡ್ಡಪಟ್ಟಣದಲ್ಲಿ ೧೨–೧೩ ಜನದ ಹೊಟ್ಟೆಬಟ್ಟೆಯ ಪಾಡೆಂದರೆ ಸುಮ್ಮನಾಯಿತೇ? ಅಂತೂ ಹೆಸರಿಗೆ ಆರುನೂರುರೂಪಾಯಿ ಸಂಬಳವಾದರೂ ರಮೆಯ ಕಾರ್ಪಣ್ಯದ ಅಭಿಶಾಪ ತಪ್ಪಲಿಲ್ಲ. ಅಲ್ಲದೆ ಸುರೇಶ ಅಭಿಮಾನಿ. ರಮಾ ಕೂಲಿಗೆ ಕಸೂತಿ ಗಿಸೂತಿಯ ಕೆಲಸಮಾಡಲು ಅಥವಾ ಅವಳೆಲ್ಲಾದರೂ ಕೆಲಸಕ್ಕೆ ಸೇರಲು ಒಪ್ಪುತ್ತಿರಲಿಲ್ಲ. ಎಷ್ಟಾಗಲೀ, ಅದು ಅವನ ಅಧಿಕಾರದ ಗರಿಮೆಗೆ ಕುಂದು. ಇಷ್ಟಕ್ಕೂ ಆ ತುಂಬಿದ ಮನೆಯಲ್ಲಿ ಮನೆಗೆಲಸಗಳನ್ನೆಲ್ಲಾ ಮುಗಿಸಿಕೊಂಡು ಕಸೂತಿಕೆಲಸವನ್ನು ಮಾಡಲು ಅವಳಿಗೆ ವೇಳೆಯಾದರೂ ಎಲ್ಲಿರುತ್ತಿತ್ತು?

ಅಲ್ಲದೆ ದುರ್ಭಿಕ್ಷಕ್ಕೆ ಅಧಿಕಮಾಸವೆಂಬಂತೆ ಕಾಲಕ್ರಮದಲ್ಲಿ ಎರಡು ಮಕ್ಕಳು ಬೇರೇ ಆಗಿದ್ದುವು. ಬಡತನದ ಸಂಸಾರವೆಂಬ ಕಠಿಣವಾದ ಕುಲುಮೆಯಲ್ಲಿ ಇಬ್ಬರೂ ಬೆಂದುಹೋಗಿದ್ದರು. ಮನೆಯಲ್ಲಿ ಬೇರೇ ಓರಿಯರಿದ್ದರೂ, ಸಂಸಾರದ ಹೊರೆಯೆಲ್ಲಾ ಸುರೇಶನ ತಲೆಯ ಮೇಲೆಯೇ ಬಿದ್ದಿತ್ತು. ಅವನ ಸಂಸ್ಕಾರ ಒಳ್ಳೆಯದಾಗಿದ್ದುದರಿಂದ ಅವನು ತನ್ನ ಹೊಣೆಯರಿತು ಹಿರಿತನದಿಂದ ನಡೆದುಕೊಂಡನು. ತನ್ನ ಸುಖದ ಆಸೆ ಗಳನ್ನೆಲ್ಲಾ ನುಂಗಿಕೊಂಡು ಹತ್ತುಜನದ ಹಿತಕ್ಕಾಗಿ ದುಡಿದನು. ಮನೆ

ತನದ ಗೌರವವನ್ನು ಹೆಚ್ಚಿಸಿದನು. ರಮೆಗೆ ತನ್ನ ಆಸೆ ಆಕಾಂಕ್ಷೆಗಳನ್ನು ತುಮುಮುವುದು ಇಷ್ಟು ಸುಲಭವಾಗಲಿಲ್ಲ. ಎಷ್ಟಾಗಲೀ ಪಾಪ ಅವಳು ಹೆಣ್ಣು ಹೆಂಗಸು! ಏನು ಮಾಡಿಯಾಳು? ಗಂಡ ಹೀಗೆ ವಿಶ್ವಕುಟುಂಬಿ ಯಾಗಿರುವುದು ಅವಳಿಗೆ ಇಷ್ಟವಿತ್ತೋ, ಇಲ್ಲವೋ ಅವಳಂತೂ ಗಂಡ ನನ್ನು ಅನುಸರಿಸಿ ನಡೆದಳು.

ಅದೇ ಪಕ್ಕದ ಮನೆ ಭಾಗೂಬಾಯಿ, ಆಕೆಯ ಗಂಡನಿಗೆ ಸುರೇಶನ ಅರ್ಧದಷ್ಟು ಕೂಡಾ ಸಂಬಳವಿಲ್ಲದಿದ್ದರೂ ಅವರೆಷ್ಟೋ ನೆಮ್ಮದಿಯಾಗಿ ಸಂಸಾರಮಾಡಿಕೊಂಡಿದ್ದರು. ಇತ್ತೀಚೆಗೆ ತಾವು ಬಾಡಿಗೆಗಿದ್ದ ಮನೆಯನ್ನೇ ಸ್ವಂತಕ್ಕೆ ಮಾಡಿಕೊಂಡಿದ್ದರು. ಒಂದಷ್ಟು ಮೇಲುಖರ್ಚುಮಾಡಿ ಅದನ್ನು ತಮ್ಮ ಅನುಕೂಲಕ್ಕೆ ತಕ್ಕಹಾಗೆ ಅಳವಡಿಸಿಕೊಂಡಿದ್ದರು. ಸೊಗಸಾದ ಒಂದು ಸಣ್ಣಕಾರು ಬೇರೇ ಕೊಂಡಿದ್ದರು. ತಮ್ಮ ಮಕ್ಕಳನ್ನು ಸುಖವಾಗಿ ಬೆಳೆಸಿದ್ದರು. ಒಳ್ಳೆಯ ವಿದ್ಯಾಭ್ಯಾಸವನ್ನು ಕೊಡಿಸುತ್ತಿದ್ದರು. ಗಂಡಹೆಂಡಿರಿಬ್ಬರೂ ಬುದ್ಧಿವಂತರು. ಎಲ್ಲಾ ಸರಿಯೇ. ಆದರೆ ಅವರ ಜೀವನ ರೀತಿ ಮಾತ್ರ ರಮೆಗೆ ಸರಿಬೀಳಲಿಲ್ಲ. ಹೆಚ್ಚು ಖರ್ಚಾಗುತ್ತಲ್ಲಾ ಅಂತ ಭಾಗೂಬಾಯಿ ಸ್ವಂತ ತಮ್ಮನನ್ನೇ ಮನೇಬಿಟ್ಟು ಓಡಿಸಿದ್ದರು. ಗಂಡನ ಕಡೆಯ ಬಂಧುಬಳಗದವರು ಏನಾದರೂ ಬಂದರೆ ಅವರಿಗೆ ಊಟ ಕೂಡಾ ದಕ್ಕುತ್ತಿರಲಿಲ್ಲ. ಭಾಗೂಬಾಯಿ ಬೆಣ್ಣೆಯಲ್ಲಿ ಕೂದಲೆಳೆದಹಾಗೆ ಬಲು ನಾಜೂಕಾಗಿ ಮಾತಾಡಿ ಬರೀಬಾಯಿಮಾತಿನ ಉಪಚಾರದಲ್ಲೇ ಬಂದವರನ್ನು ಸಾಗಹಾಕುತ್ತಿದ್ದರು.

ಅವರ ಹಾಗೆಯೇ ತಾವೂ ತಾನುಂಟೋ ಮೂರುಲೋಕವುಂಟೋ ಎಂಬಂತೆ ತಮ್ಮ ಸುಖವನ್ನು ಮಾತ್ರ ನೋಡಿಕೊಂಡು ಇದ್ದುಬಿಟ್ಟಿದ್ದರೆ ಅವರ ಹತ್ತಿರಷ್ಟು ಸಾಮಾನು ಸರಂಜಾಮುನ್ನು ಸಂಗ್ರಹಿಸಿರಬಹುದಾಗಿತ್ತು. ರಮಾ ಸುರೇಶರು ಸಿರಿವಂತರಾಗಿ ಮೆರೆಯಬಹುದಾಗಿತ್ತು. ಆದರೆ ಸುರೇಶನ ತಾಯಿತಂದೆಗಳ, ಅಣ್ಣತಮ್ಮಂದಿರ, ಅವನ ಸೋದರಮಾವನ ತಬ್ಬಲಿ ಮಕ್ಕಳ ಗತಿ ಏನಾಗಬೇಕಿತ್ತು! ಸುರೇಶನಂತೂ ಕರ್ತವ್ಯಚ್ಯುತನಾಗಿ ಎಂದೂ ಸುಖಿಯಾಗಿರುತ್ತಿರಲಿಲ್ಲ. ತನ್ನವರು ಹತ್ತುಜನ ಹಸಿದಿರುವಾಗ ಉಣ್ಣುವ ಪ್ರಸ್ತಾನ್ನ ಅವನ ಪಾಲಿಗೆ ವಿಷವಾಗಿ ಪರಿಣಮಿಸುತ್ತಿತ್ತು.

ಪರಾರ್ಥಪರತೆ, ತನ್ನವರಾದ ಹಿರಿಕಿರಿಯರ ಸೇವೆ ಸಂಪೋಷಣೆಗಳಲ್ಲಿಯೇ ಅವನ ಬಾಳೆಲ್ಲ ಸವೆದಿತ್ತು.

ಈಗಲಾದರೂ ಗಂಡನಾದರೂ ಸುಖವಾಗಿದ್ದಾನೆಯೇ?...... ಇನ್ನೂ ಮೂವತ್ತೈದು ವರ್ಷವಿಲ್ಲ. ಆಗಲೇ ತಲೆಯ ಕೂದಲೆಲ್ಲ ನರೆಯುತ್ತ ಬಂದಿದೆ. ಹಣೆಯೆಲ್ಲ ನಿರಿಗೆ ನಿರಿಗೆಯಾಗಿದೆ. ಕಣ್ಣ ಸುತ್ತ ಕಪ್ಪು ಹರಡಿದೆ. ಸುಖಿಗಳ ಬಾಳಿನಲ್ಲಿ ಯೌವನ ಅಲ್ಲಲ್ಲಿ ತಂಗಿ, ನಿಂತು, ಕುಳಿತು ನಡೆಯುತ್ತ ಸಾಗುತ್ತದೆ. ಮುಪ್ಪು ಬರಲೋ ಬೇಡವೋ ಎಂದು ಅನುಮಾನಿಸುತ್ತ ಬರುತ್ತದೆ. ದೀನದುಃಖಿತರ ಬದುಕಿನಲ್ಲೋ ಯೌವನ ನಾಗಾಲೋಟ ದಲ್ಲಿ ಓಡಿಬಿಡುತ್ತದೆ. ಮುಪ್ಪು ಸಮಯಕ್ಕೆ ಮುಂಚಿತವಾಗಿಯೇ ಅಡರಿ ಬಿಡುತ್ತದೆ.

ರಮೆಗೆ ಗಂಡು ಮಕ್ಕಳಿಗೆ ಚೆನ್ನಾಗಿ ಆರೈಕೆಮಾಡಬೇಕು, ಸುಖವಾಗಿ ನೋಡಿಕೊಳ್ಳಬೇಕು ಎಂದು ಆಸೆ. ಮನೆಮಂದಿಯೆಲ್ಲಾ ಪುಷ್ಟಿಯಾದ ಆಹಾರವನ್ನು ತಿಂದುಂಡು ಸುಖವಾಗಿರಬೇಕೆಂದರೆ ಗಂಡನಿಗೆ ಬರುತ್ತಿದ್ದ ಸಂಬಳ ಒಂದು ವಾರಕ್ಕೂ ಸಾಲುತ್ತಿರಲಿಲ್ಲ. ಹತ್ತು ಜನ ಇರುವ ಮನೆ ಯಲ್ಲಿ ಪಂಙ್ತಿಭೇದಮಾಡುವುದು ಅವಳಿಗೆ ಹಿಡಿಸದು.........ತನ್ನ ಸಂಸಾರವನ್ನು ಸುಖವಾಗಿ ಸಾಗಿಸುವುದು ಬಿಡಿಸಲು ಬಾರದ ಜಟಿಲ ಸಮಸ್ಯೆಯಾಗಿ ಕಂಡಿತು ರಮೆಗೆ. ಧಾರಾಳ, ಧನಸಮೃದ್ಧಿ ಎರಡೂ ಏಕೆ ಒಂದೆಡೆ ಇರಬಾರದು? ಎಷ್ಟು ಯೋಚಿಸಿದರೂ ಉತ್ತರ ಸಿಗಲಿಲ್ಲ. ಮುದುಕರು ಮಕ್ಕಳು ಅಥವಾ ಇನ್ನೂ ಓದುತ್ತಾ ಇದ್ದು ಪ್ರಾಯಸಮರ್ಥ ರಾಗದವರು ಕುಳಿತು ಉಣ್ಣುವುದು ಸರಿ. ಆದರೆ ಉಳಿದವರಾದರೂ ಏಕೆ ಪರಾವಲಂಬನೆ ಅಪಮಾನಕರವೆಂದು ತಿಳಿಯಬಾರದು? ದುಡಿದು ತರುವುದು ಒಂದು ಕೈ, ತಿನ್ನುವುದು ಹತ್ತು ಬಾಯಾದರೆ ಇನ್ನೆಷ್ಟು ದುಡಿದರೆ ತಾನೇ, ಅದನ್ನಿನ್ನೆಷ್ಟು ಒಪ್ಪವಾಗಿ ಬಳಸಿದರೆ ತಾನೇ ಸಂಸಾರದ ತಕ್ಕಡಿ ಸರಿದೂಗೀತು?

ಅವಳ ಅರಿವಿಲ್ಲದೆಯೇ, ಬಡವಾದ ಗಂಡನನ್ನು ನೋಡಿ ಉಕ್ಕಿಬಂದ ವ್ಯಥೆಯಿಂದ ಕಣ್ಣಲ್ಲಿ ನೀರು ಉಕ್ಕಿ ಹರಿಯಿತು. ಪುಣ್ಯಕ್ಕೆ ನಾಟಕದಲ್ಲಿ ತನ್ಮಯನಾಗಿದ್ದ ಸುರೇಶ ಅವಳ ಕಣ್ಣೀರನ್ನು ಕಾಣಲಿಲ್ಲ.

ನಾಟಕ ಮುಗಿದು ಅವರ ಮನೆಗೆ ಬಂದಾಗ ಸಿಡಿಲಿನಂಥ ಸುದ್ದಿಯೊಂದು ಅವರನ್ನು ಸ್ವಾಗತಿಸಲು ಕಾದಿತ್ತು. ಇತ್ತ ಇವರುಗಳು ನಾಟಕಕ್ಕೆ ಹೋಗಿ ಮನೆಮಂದಿಯೆಲ್ಲಾ ದೇವಸ್ಥಾನಕ್ಕೆ ಹೋಗಿದ್ದ ಹೊತ್ತಿನಲ್ಲಿ ಇವರ ಮನೆಗೂ, ಮಗ್ಗುಲು ಮನೆಗೂ ಕಳ್ಳರು ಕನ್ನ ಕೊರೆದು ಕೈಗೆ ಸಿಕ್ಕಿದ ಸಾಮಾನುಗಳನ್ನು ದೋಚಿಕೊಂಡು ಹೋಗಿದ್ದರು. ಆದರೆ ಸುರೇಶನಿಗೆ ಅಂತಹ ಭಾರೀ ನಷ್ಟವೇನೂ ಆಗಲಿಲ್ಲ. ಏಕೆಂದರೆ ಅವನ ಮನೆಯಲ್ಲಿದ್ದ ಸಾಮಾನೂ ಅಷ್ಟಕ್ಕಷ್ಟೆ. ಅಡಿಗೇಮನೆಯಲ್ಲಿ ಅಡಿಗೆಗೆ ಅತ್ಯಾವಶ್ಯಕವಾಗಿ, ಅನಿವಾರ್ಯವಾಗಿ ಬೇಕಾಗಿದ್ದ ಕೆಲವು ಹಳೆಯ ಹಿತ್ತಾಳೆಯ ಪಾತ್ರೆಗಳು, ದೇವರ ಮನೆಯಲ್ಲಿ ಕೆಲವು ಮಣ್ಣಿನ ಮೂರ್ತಿಗಳು, ಕಾಗದದ ದೇವರ ಪಠಗಳು, ಒಂದು ಹಿತ್ತಾಳೆಯ ನಂದಾದೀಪ, ಎರಡು ಮೂರು ಹರಕು ಚಾಪೆಗಳು, ಒಂದು ಕಾಲುಮುರಿದ ಇಟ್ಟಿಗೆಗಳನ್ನು ಒತ್ತಾಸೆಯಾಗಿ ಇಟ್ಟಿದ್ದ ಹಗ್ಗದ ಮಂಚ. ಇನ್ನು ಮನೆಮಂದಿಯ ಹಳೆಯದಾಗಿ ಹರಿದುಹೋಗಿದ್ದ ನಿತ್ಯಗಟ್ಟಲೆಯ ಬಟ್ಟೆಬರೆಗಳು. ಒಂದು ಮೂಲೆಯಲ್ಲಿ ಬಿದ್ದಿದ್ದ ಹಿಮ್ಮಡಿ ಕಿತ್ತುಹೋದ, ಅಥವಾ ಲೇಸಿಲ್ಲದ, ತಿರುಕನೂ ತಿರಸ್ಕರಿಸಬಹುದಾದ ಹಳೆಯ ಚಪ್ಪಲಿ, ಬೂಟ್ಸುಗಳು. ಕಳ್ಳರಿಗೂ ಸಹ ಅಂಥ ಹೀನದೀನ ಪದಾರ್ಥಗಳನ್ನು ತೆಗೆದುಕೊಂಡು ಹೋಗಲು ಮನಸ್ಸು ಬರಲಿಲ್ಲವೇನೋ?

ಮನೆಯನ್ನೆಲ್ಲಾ ಶೋಧಿಸಿ, ಸಾಮಾನುಗಳನ್ನೆಲ್ಲಾ ಚೆಲ್ಲಾಪಿಲ್ಲಿ ಮಾಡಿಬಿಟ್ಟು, ಒಂದು ಗಡಿಯಾರ, ಬಾಗಿಲಿಗೆ ಕಟ್ಟಿದ್ದ ಒಂದು ಮಣಿ ತೋರಣ, ಮತ್ತು ಇದ್ದದ್ದರಲ್ಲಿ ಚೆನ್ನಾಗಿ ಕಾಣುತ್ತಿದ್ದ ಕೆಲವು ಹಿತ್ತಾಳೆಯ ಪಾತ್ರೆಗಳನ್ನು ಮಾತ್ರ ತೆಗೆದುಕೊಂಡು ಹೋಗಿದ್ದರು. ಸ್ವಲ್ಪ ಹೊತ್ತು ಪೇಚಾಡಿ ಮನೆಮಂದಿಯೆಲ್ಲಾ ನಿದ್ದೆಹೋದರು.

ಮರುದಿನ ಸಂಜೆ ಸುರೇಶ್ ಮನೆಗೆ ಬಂದಾಗ ರಮಾ ಮನೆಯಲ್ಲಿ ಎಲ್ಲಿಯೂ ಇಲ್ಲದುದನ್ನು ಕಂಡು ಹಿತ್ತಲಿಗೆ ಹೋದನು. ನಲ್ಲಿಯ ಬಳಿ ಹೀಬೇಗಿಡದ ಕಡೆಗೆ ಮುಖಮಾಡಿಕೊಂಡು, ಹಿಂದಿನ ದಿನದ ಅದೇ ಗುಲಾಬಿಯ ಸೀರೆಯುಟ್ಟು ನಿಂತಿದ್ದ ರಮೆಯನ್ನು ನೋಡಿ ಅವನಿಗೆ ಏನಾದರೂ ಚೇಷ್ಟೆಮಾಡಬೇಕೆನ್ನಿಸಿತು. ಸುತ್ತಮುತ್ತ ನೋಡಿ, ಯಾರೂ

ಇಲ್ಲಿದ್ದನ್ನು ದೃಢಪಡಿಸಿಕೊಂಡು ಎರಡು ಹೆಜ್ಜೆ ಮುಂದಿಟ್ಟನು. ನಲ್ಲಿಯ ಬಳಿ ನಿಂತಿದ್ದ ಆ ವ್ಯಕ್ತಿ ಹಿಂತಿರುಗಿ ನೋಡಿತು. ಸುರೇಶ್ ಬೆಚ್ಚಿಬಿದ್ದನು. ರಮೆಯಲ್ಲ ಅವನ ನಾದಿನಿ. "ತಟ್ಟನೆ ಹೋಗಿ ಅವಳ ಕಣ್ಣು ಮುಚ್ಚಿದ್ದರೆ, ಅಥವಾ ಅಪ್ಪಿಕೊಂಡುಬಿಟ್ಟಿದ್ದರೆ ಎಷ್ಟು ಆಭಾಸವಾಗುತ್ತಿತ್ತು! ಅವಳಾದರೂ ಏನು ಅಪಾರ್ಥಮಾಡಿಕೊಳ್ಳುತ್ತಿದ್ದಳೋ? ಸದ್ಯ, ದೇವರೇ ಕಾಪಾಡಿದ" ಎಂದುಕೊಂಡ ಸುರೇಶ್. ಉಗುಳು ನುಂಗುತ್ತಾ "ರಮಾ ಎಲ್ಲಿ?" ಎಂದು ನಾದಿನಿಯನ್ನು ಕೇಳಿದನು. ಅವಳು "ಭಾಗೂಬಾಯಿ ಮನೆಗೆ ಹೋಗಿದಾರೆ" ಎಂದು ಹೇಳಿದಳು. ಸುರೇಶ್ ಬಂದಂತೆಯೇ ಹಿಂತಿರುಗಿ ಹೋಗಿ ತನ್ನ ಕೊಠಡಿಯಲ್ಲಿ ಕುಳಿತನು. ಅಷ್ಟರಲ್ಲಿ ರಮೆಯೂ ಹಿಂತಿರುಗಿ ಬಂದಿದ್ದಳು. ಗಂಡನಿಗೆ ಟೀ ಕೊಡುವುದನ್ನೂ ಮರೆತು ವಿಷಾದಭರಿತ ಉತ್ಸಾಹದಲ್ಲಿ ಸುದ್ದಿಯನ್ನು ಬೀರಿದಳು—"ಪಾಪ! ಭಾಗೂಬಾಯಿ ಮನೇಲಿ ಏಳೆಂಟುಸಾವಿರರೂಪಾಯಿನ ಸಾಮಾನು ಹೋಯಿತಂತೇಂದ್ರೇ. ಪಾಪ! ಆಕೆಯ ಗೋಳು ಹೇಳಿತೀರದು."

"ಏಳೆಂಟುಸಾವಿರರೂಪಾಯಿನ ಸಾಮಾನು ಹೋಯಿತೋ ಇಲ್ಲಾ ಏಳೆಂಟುನೂರುರೂಪಾಯಿನ ಸಾಮಾನು ಹೋಯಿತೋ? ಯಾರಿಗೆ ಗೊತ್ತು? ಆಕೆ ಜಂಭಕೊಚ್ಚಿಕೊಂಡರೋ ಇಲ್ಲವೋ?"

"ನಿಜವಾಗಿಯೂ ತುಂಬಾ ನಷ್ಟವಾಗಿದೇಂದ್ರೆ. ಅಡಿಗೇಮನೆಯ ಒಳ್ಳೊಳ್ಳೇ ಪೂನಾದ ಹಿತ್ತಾಳೆಯ ಪಾತ್ರೆಗಳು—ಅವಕ್ಕೆ ಮೊನ್ನೆ ಇನ್ನೂ ಮೂವತ್ತು ರೂಪಾಯಿ ಕೊಟ್ಟು ಕಲಾಯಿ ಹಾಕಿಸಿದ್ದರು, ಅದಿನ್ನ್ಯಾಪಾಟಿ (ಅದಿನ್ನೆಷ್ಟು) ಪಾತ್ರೆ ಪರಟಿಗಳಿದ್ದಿರಬೇಕು ನೀವೇ ಯೋಚಿಸಿಕೊಳ್ಳಿ, ಕಲಾಯಿ ಹಾಕಿಸೋಕೇ ಅಷ್ಟು ದುಡ್ಡು ಕೊಡಬೇಕಾದರೆ—ದೇವರ ಮನೇ ಬೆಳ್ಳೀ ಸಾಮಾನುಗಳು, ಬೆಳ್ಳೀ ಮಂದಾಸನ, ರೇಡಿಯೋ, ಮಗುವಿನ ಆಟದ ಟ್ರೈಸಿಕಲ್ಲು, ಸಿಂಗರ್ ಮೆಷಿನ್ನು, ನಿಲುವುಗನ್ನಡಿಗಳು, ರತ್ನಗಂಬಳಿಗಳು, ಆಕೆಯ ಸಿಲ್ಕ್ ಸೀರೆಗಳು, ಒಡವೆವಸ್ತು ಎಲ್ಲಾ ದೋಚಿಕೊಂಡು ಹೋಗಿದ್ದಾರೆ ಕಳ್ಳರು. ಐರನ್‌ಸೇಫ್ ಅದು ಹೇಗೆ ಒಡೆದರೋ, ಅದರಲ್ಲಿದ್ದ ಎರಡು ಸಾವಿರ ರೂಪಾಯಿ ನಗದು ಹಣ ಬೇರೇ ಕಳ್ಳತನ ಮಾಡಿದ್ದಾರೆ.

"ಬ್ಯಾಂಕಿನಲ್ಲಿ ಇಡೋಕೆ ಏನು ಬಂದಿತ್ತಂತೇ ಕೇಡು ಅವರಿಗೆ?"

"ಸರಿ, ಹಾಗಂತ ಹೇಳಿ ಆತನ ಮುಂದೆ, ಅಳುವವರ ಮೇಲೆ ಒರಳುಕಲ್ಲು ಎತ್ತಿಹಾಕಿದ ಹಾಗೆ. ಅವರು ಮೊನ್ನೆ ಹಾಸ್ಟಲ್‌ನಲ್ಲಿ ಇದ್ದು ಕೊಂಡು ಓದುತ್ತಾ ಇರೋ ಹುಡುಗರಿಗೆ ಇನ್ನು ಹತ್ತು ರೂಪಾಯಿ ಹೆಚ್ಚಿಗೆ ಕಳುಹಿಸೋಕೆ ಹಿಂದೆಗೆದೆ. ಅಯ್ಯೋ, ಹೀಗೆ ಸರ್ವನಾಶ ಆಗುತ್ತೇಂತ ಕನಸುಕಂಡಿದ್ದೆವೇ ಅಂತ ಗೋಳಾಡ್ತಾ ಇದಾರೆ" ಎನ್ನುತ್ತಾ ಟೀ ತರಲು ಒಳಗೆ ಹೋದಳು. ಸುರೇಶ್ ಟೀ ಕುಡಿಯುತ್ತಾ ಸಂಜೆ ತಾನು ಮಾಡಲಿದ್ದ ಅಚಾತುರ್ಯವನ್ನು ಹೇಳಿದನು.

ರಮಾ ಮೃದುವಾಗಿ ಹೇಳಿದಳು—"ಕಾಂತಾಗೂ ಪಾಪ, ಒಂದಾದರೂ ಒಳ್ಳೆಯ ಸೀರೆಯಿಲ್ಲ. ನಾನೇ ಅವಳಿಗೆ ಅದನ್ನು ಉಟ್ಕೊಕೋ ಅಂತ ಬಲವಂತಮಾಡಿದೆ. ನಾಳೆ ಸುರಮಾಗೆ ಸ್ಕೂಲ್ ಡೇ—ನಾಳೆ ಅವಳದನ್ನ ಉಟ್ಕೊಕೊಳ್ಳುತ್ತಾಳೆ."

"ಏನು ಎಲ್ಲಾರೂ ಸರದೀ ಪ್ರಕಾರ ಉಟ್ಕೊಕೊಳ್ಳಬೇಕು ಅಂತ ಮಾಡಿದೀರೋ" ಎಂದು ನಕ್ಕ ಸುರೇಶ.

ರಮಾ ಮೌನವಾಗಿ ಅದೇನೋ ಹೊಲಿಯುತ್ತಿದ್ದಳು.

"ಅದೇನು ಹೊಲಿಯುತ್ತಾ ಇದ್ದೀ ರಮಾ? ಅಷ್ಟು ಚಿಕ್ಕ ಅಂಗಿ ಯಾರಿಗೆ?"

"ನಳಿನೀ ಮಗೂಗೆ ಕಳುಹಿಸೋಣಾಂತ."

"ಅದೇನು ಸೋದರ ಸೊಸೇನೇ ಸೊಸೇನೂ ಮಾಡಿಕೊಳ್ಳೋಣ ಅಂತಲೋ ಈಗಿನಿಂದ ಒಲಿಸಿಕೊಳ್ಳೋಕೆ ಪ್ರಾರಂಭ?" ಹಾಸ್ಯವಾಗಿ ಕೇಳಿದ ಸುರೇಶ್. ನಳಿನಿ ಸುರೇಶನ ತಂಗಿ. ಅಮೃತಸರದಲ್ಲಿ ಅತ್ತೇ ಮನೆಯಲ್ಲಿದ್ದಳು. ಅವಳಿಗೆ ಹೆಣ್ಣುಮಗುವಾಗಿ ಒಂದು ತಿಂಗಳಾಗಿತ್ತು.

"ಚೆನ್ನಾಗಿ ಹೇಳುತೀರೀಂದ್ರೆ. ನ್ಯಾಯವಾಗಿ ನಾವು ನಳಿನೀನ ಬಾಣಂತನಕ್ಕೆ ಇಲ್ಲಿಗೇ ಕರೆಸಿಕೊಳ್ಳಬೇಕಾಗಿತ್ತು. ಅವಳ ಪುಣ್ಯ ಚೆನ್ನಾಗಿದೆ. ಅತ್ತೇಮನೆಯವರು ಒಳ್ಳೆಯವರು. ನಮ್ಮ ಇಲ್ಲಿನ ಕಾರ್ಪಣ್ಯ, ಅನಾನು ಕೂಲ ನೋಡಿಯೋ ಏನೋ ನಾವೇ ಬಾಣಂತನ ಮಾಡಿಕೊಳ್ಳುತ್ತೇವೆ

ಅಂದರು. ನಮಗೆ ನಳಿನಿಗೆ ಒಂದು ಸೀರೆ ಕಳುಹಿಸುವುದಕ್ಕೂ ಲಭ್ಯವಿಲ್ಲ. ಮಗುವಿಗಾದರೂ ನಮ್ಮ ಕೈಲಾದದ್ದು ಚೂರುಪಾರು ಬಟ್ಟೇ ಬರೇ ಕಳುಹಿಸಿಕೊಡಬೇಡವೇ?''

ಆ ಸಂಜೆ ಸುರೇಶನಿಗೆ ಒಂದಾದ ಮೇಲೊಂದು ಆಶ್ಚರ್ಯಗಳು ಕಾದಿದ್ದುವು. ರಮಾ ಪೂರಾ ಬದಲಾಯಿಸಿಹೋಗಿದ್ದಳು. ವಿಸ್ಮಯ ದಿಂದ ಅವಾಕ್ಕಾಗಿ ಅವಳನ್ನೇ ನೋಡತೊಡಗಿದನು.

''ನಿನ್ನೇ ನಡೆದ ಕಳ್ಳತನದಿಂದ ದೇವರೇ ನನಗೊಂದು ಪಾಠ ಕಲಿಸಿದ ಹಾಗಾಯಿತು. ಭಾಗೂಬಾಯಿ ಇದ್ದಾಗ ಒಬ್ಬರಿಗೆ ಕೈಯೆತ್ತಿ ಕೊಡಲಿಲ್ಲ. ಬಂದ ಅತಿಥಿಗಳಿಗೆ ಒಂದು ತುತ್ತು ಅನ್ನ ಹಾಕಲಿಲ್ಲ. ಈಗ ನೋಡಿ, ಅವರು ಕೂಡಿಟ್ಟದ್ದು, ಕೊಂಡಿಟ್ಟದ್ದು ಎಲ್ಲಾ ಕಳ್ಳರ ಪಾಲು. ಆಕೆಯ ದುಃಖ ನೋಡುವುದಕ್ಕಾಗುವುದಿಲ್ಲ. ದುಃಖದಿಂದ ಆಕೆಗೆ ಹುಚ್ಚು ಹಿಡಿದ ಹಾಗಾಗಿದೆ.

''ಈ ಹೊತ್ತು ಅರಳಿದ ಹೂವು ನಾಳೆ ಬಾಡುವುದು ಹಾಗಿರಲಿ; ನದಿಗಳೇ ಬತ್ತುತ್ತವೆ. ಪರ್ವತಗಳೇ ಉರುಳಿಬೀಳುತ್ತವೆ. ಪ್ರಕೃತೀಲಿ ಎಂತೆಂಥಾ ಅದ್ಭುತಗಳೋ ಕ್ಷಣಕ್ಷಣಕ್ಕೂ ಜರುಗುತ್ತಾ ಇರುತ್ತವೆ. ಇನ್ನು ಮನುಷ್ಯ ಗಳಿಸಿದ ಹಣ ಶಾಶ್ವತವೇ?

''ಮನೆಯಲ್ಲಿ ಶೇಖರಿಸಿಟ್ಟ ಹಣ ಸಾಮಾನುಗಳನ್ನು ಕಳ್ಳರು ಕೊಳ್ಳೆ ಹೊಡೆದುಕೊಂಡುಹೋಗಬಹುದು. ಅಥವಾ ಮನೆಗೇ ಬೆಂಕಿ ಬೀಳ ಬಹುದು. ಬ್ಯಾಂಕಿನಲ್ಲಿ ಇಟ್ಟರೇ ಬ್ಯಾಂಕೇ ಮುಳುಗಿಹೋಗಬಹುದು. ಮನುಷ್ಯ ಮಾಡುವ ಧರ್ಮ ಒಂದು ಮಾತ್ರ ಶಾಶ್ವತ.

''ನಾವೂ ಭಾಗೂಬಾಯಿಯ ಹಾಗೆ ಇದ್ದಿದ್ದರೆ ಆಕೆಗಾದಹಾಗೇ ನಮಗೂ ಆಗುತ್ತಿತ್ತೋ ಏನೋ? ಯಾರಿಗೆ ಗೊತ್ತು? ಆ ಗಂಡ ಹೆಂಡಿರ ಪಾಲಿಗೆ ಈ ಹೊತ್ತು ಇರೋದು ಶೂನ್ಯವಾದ ಮನೆ. ನಮಗೋ ನಾವು ಸೇವಿಸಿ, ನಮ್ಮಿಂದಾದಷ್ಟು ಸುಖವನ್ನು ಅವರಿಗೆ ಉಂಟುಮಾಡಲೆತ್ನಿಸಿದ, ಹತ್ತಾರು ಜನದ ಪ್ರೀತಿ ಅನ್ನೋ ಎಣೆಯಿಲ್ಲದ ಸಂಪತ್ತಿದೆ.''

''ಪಾಪ! ನಿನ್ನೇ ರಾತ್ರಿ ನಮ್ಮ ಮನೆಗೆ ಕನ್ನಾ ಕೊರೆದ ಕಳ್ಳರಿಗೆ ಎಷ್ಟು ನಿರಾಶೆಯಾಗಿರಬೇಕು?'' ಗೊಳ್ಳನೆ ನಕ್ಕ ಸುರೇಶ.

ಆ ಹೊತ್ತು ರಮಾ ಅವನ ಹೃದಯದ ಹತ್ತಿರ ಬಂದಷ್ಟು ಹತ್ತಿರಕ್ಕೆ ಮತ್ತಾವಾಗಲೂ ಬಂದಿರಲಿಲ್ಲ. ಆ ದಂಪತಿಗಳ ಪರಸ್ಪರ ಹೃದಯದರ್ಶನದ ಪ್ರೇಮಾನುರಾಗಗಳ ಬೆಳಕಿನಲ್ಲಿ ಬೇರೊಂದು ಆನಂದಲೋಕವೇ ಅರಳಿ ಹೋಯಿತು.

# ಮಗನ ಮುಂಜಿ

ಭಂಗಾರ ಸೆಟ್ಟರಿಗೆ ಮಗನ ಮುಂಜಿಯ ಯೋಚನೆ ಹತ್ತಿತ್ತು. ಅವರ ಹೆಂಡತಿ ಸೀತಾಲಕ್ಷ್ಮಮ್ಮನವರೂ ಗಂಡನನ್ನು ಪದೇಪದೇ ಪೀಡಿಸುತ್ತಿದ್ದರು—ವಾಸೂ ಮುಂಜಿಗಾಗಿ. ಸೆಟ್ಟರ ತಾಯಿ "ಮಗೂ, ಇನ್ನೇನು, ಇವತ್ತೊ ನಾಳೆಯೋ ನಾನು ಕಣ್ಣು ಮುಚ್ಚಿಕೊಳ್ಳುತ್ತೇನೆ. ನಾಸಿರೋದ್ರೊಳಗೆ ಅವನಿಗೊಂದು ಮೂರೆಳೇ ಶಾಸ್ತ್ರ ಆಯಿತೂ ಅಂತ ಅನ್ನಿಸಿಬಿಡಬಾರದೇ ಅಪ್ಪ? ಅದನ್ನು ಕಣ್ಣಿಂದ ನೋಡಿಬಿಡಬೇಕೆಂದು ಈ ಸಾಯೋ ಮುದುಕಿಯ ಅಭಿಲಾಷೆ. ಅದನ್ನು ನೋಡಿ ಸುಖವಾಗಿ ಪ್ರಾಣ ಬಿಡುತ್ತೇನೆ. ನನಗೂ ವಯಸ್ಸು ಎಪ್ಪತ್ತಾಯಿತು. ಇನ್ನೆಷ್ಟು ದಿನ ನಾನು ಬದುಕಿರುತ್ತೇನೆ?" ಅಂತ ಅನ್ನುತ್ತಿದ್ದರು. ಅವರ ಸ್ನೇಹಿತರೂ ಕೇಳುತ್ತಿದ್ದರು: "ಏನಯ್ಯಾ, ಈ ಊರಲ್ಲೇ ವಾಸೂ ಮುಂಜಿ ಮಾಡಿಬಿಡಯ್ಯಾ. ನಾವಂತೂ ಚಿರೋಟಿ ಸಮಾರಾಧನೆ ಊಟಕ್ಕೆ ಖಂಡಿತ ತಪ್ಪಿಸಿಕೊಳ್ಳುವವರಲ್ಲ." ಅವರ ಮನೆಯ ಪುರೋಹಿತರು ವಿಟ್ಠಲಭಟ್ಟರ ಗಲಾಟೆಯಂತೂ ಅಸಾಧ್ಯವಾಗಿತ್ತು. "ಸ್ವಾಮಿ, ಸೆಟ್ಟರೆ, ನಿಮ್ಮ ಕನಿಷ್ಠ ಕುಮಾರನಿಗೆ ಬರೋ ಸೋಮವಾರಕ್ಕೆ ಹದಿನಾಲ್ಕು ತುಂಬುತ್ತೆ. ಇನ್ನೂ ಉಪನಯನವಾಗಿಲ್ಲ. ಇದೇನು ನಾಚಿಕೆಗೇಡು? ನಮ್ಮ ಕಾಲದಲ್ಲಿ ಎಂಟು-ಒಂಬತ್ತು ವರ್ಷಕ್ಕೆಲ್ಲಾ ಉಪನಯನ ಮಾಡಿಬಿಡುತ್ತಿದ್ದರು. ಸ್ವಾಮಿಾ, ಯಾಕೋ ಕಾಲ ಬರ್‍ತಾ ಬರ್‍ತಾ ಕೆಟ್ಟುಹೋಯಿತು. ಮುಂದಿನ ತಿಂಗಳು ಲಗ್ನ ಪ್ರಶಸ್ತವಾಗಿದೆ. ಮಾಡಿಬಿಡಿ. ದುಡ್ಡಿನ ರಾಶಿ ಮೇಲೆ ಕುಳಿತಿರೋ ನಿಮಗ್ಯಾಕೆ ಯೋಚನೆ" ಎಂದರು ಪುರೋಹಿತರು.

"ಲಗ್ನ ಚೆನ್ನಾಗಿದೆ, ಮಗನಿಗೆ ವಯಸ್ಸಾಯಿತು ಎಂದ ಮಾತ್ರಕ್ಕೆ ಉಪನಯನ ಮಾಡಿಬಿಡೋಕ್ಕಾಗುತ್ತ್ಯೆ? ನಮ್ಮ ತಾಪತ್ರಯ ನಿಮಗೇನು ಗೊತ್ತು ಭಟ್ಟರೆ; ಹಿರಿಯರೊಡನೆ ಆಲೋಚಿಸಿ ಯಾವತ್ತು ಏನೂ ಹೇಗೇಂತ ನಿಷ್ಕರ್ಷೆ ಮಾಡಬೇಕು, ಲಗ್ನಪತ್ರಿಕೆ ಪ್ರಿಂಟ್ ಮಾಡಿಸಬೇಕು. ನಮ್ಮ

ನೆಂಟ್ರೂ, ಇಷ್ಟರೂ, ಸ್ನೇಹಿತರೂ, ಜೊತೆಯ ವ್ಯಾಪಾರಗಾರರೂ, ಅವರೂ ಇವರೂ ಅಂತ ನೂರಿಪ್ಪತ್ತೆಂಟು ಜನರನ್ನ ಬರಮಾಡಿಕೊಳ್ಳಬೇಕು. ಸಾಮಾನು ಸರಂಜಾಮು ಹೊಂದಿಸಿಕೊಳ್ಳಬೇಕು. ಎಲ್ಲಕ್ಕೂ ಮುಖ್ಯವಾಗಿ ಎಷ್ಟಾಗುತ್ತೇ ಏನೂಂತ ಲೆಕ್ಕಹಾಕಿ ದುಡ್ಡು ಹೊಂದಿಸಿಕೊಳ್ಳಬೇಡವೆ? ಇಲ್ಲದೆ ಹೋದ್ರೆ ಬರೀ ಕೈ ಸುರಿದ ಹಾಗಾಗುತ್ತೆ.''

"ಏನು ಸೆಟ್ಟರೆ, ನಿಮ್ಮಂಥಾವ್ರೇ ಹೀಗೆ ಪೇಚಾಡಿದರೆ ಇನ್ನು ಬಡ ಬಗ್ಗರು ಏನು ಮಾಡಬೇಕು ಹೇಳಿ? ನಾಳೆ ಮಧ್ಯಾಹ್ನ ನಾನು ಬರ್ತೇನೆ. ನಿಮ್ಮ ಚಿಕ್ಕಪ್ಪಾನೂ ಬರ್ತಾರಲ್ವೆ? ಯಾವಾಗ ಏನೂಂತ ತೀರ್ಮಾನಿಸಿ ಬಿಡೋಣ. ರಾಮು ಕೈಲಿ ಲಗ್ನಪತ್ರಿಕೇನ ಪ್ರೆಸ್ಸಿಗೆ ನಾಳೇ ಸಾಯಂಕಾಲಾನೇ ಕಳಿಸಿಬಿಡಿ'' ಎಂದು ಹೇಳಿ ಒಂದು ತೆಂಗಿನಕಾಯಿ ವಸೂಲುಮಾಡಿಕೊಂಡು ಹೋಗಿದ್ದರು.

ಭಂಗಾರ ಸೆಟ್ಟರು ಬೆಂಗಳೂರಿನ ಪ್ರಮುಖ ವಣಿಕರು, ಶ್ರೀಮಂತರು, ಮೂರು ಮಹಡಿಯ ಮನೆಗಳಿವೆ. ಬೆಂಗಳೂರಿನಲ್ಲೇ ಎರಡು ದೊಡ್ಡ ಮಳಿಗೆಗಳಿವೆ. ಸ್ವಂತ ಜಮೀನೂ ಬೇಕಾದಷ್ಟಿದೆ. ತಿಂಗಳು ತಿಂಗಳೂ ಸಾವಿರಾರು ರೂಪಾಯಿ ವ್ಯಾಪಾರವಾಗುತ್ತಿರುತ್ತದೆ. ಅಷ್ಟಾದರೂ ಹತ್ತು-ಹನ್ನೆರಡು ಸಾವಿರ ರೂಪಾಯಿಗಳ ಸಾಲವೂ ಇದೆ. ಅವರಿಗೂ ಪಾಪ; ತಾಪತ್ರಯ. ಮೂವರು ಹೆಣ್ಣು ಮಕ್ಕಳು. ಇಬ್ಬರು ಗಂಡು ಮಕ್ಕಳು. ಅವರ ದೊಡ್ಡ ಮಗಳ ಮದುವೆಯನ್ನೇನೋ ಆರು ಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟು ಬೇಕಾದಷ್ಟು ಖರ್ಚುಮಾಡಿ ವಿಜೃಂಭಣೆಯಿಂದ ಮಾಡಿದ್ದರು. ಎರಡನೆಯ ಮಗಳಿಗೂ ಏನೂ ಕಡಮೆ ಮಾಡಲಿಲ್ಲ. ರಾಜ ವಿವಾಹ, ವಿಧಾನ ವಿಸ್ತಾರ. ಅದಾದ ಮೇಲೆ ಜ್ಯೇಷ್ಠಪುತ್ರಿಯ ನಿಷೇಕ ಪ್ರಸ್ತ. ಆಮೇಲೆ ದೊಡ್ಡ ಮಗ ರಾಮೂ ಮುಂಜಿ. ಅದಾದಮೇಲೆ ಎರಡನೆಯ ಮಗಳ ಪ್ರಸ್ತ. ತರುವಾಯ ಹಿರಿಯವಳ ಬಾಣಂತನ. ಅನಂತರ ಕಿರಿಯವಳ ಮದುವೆ······ಅಂತೂ ವರ್ಷವೆಲ್ಲಾ ಯಾರಾದ ರೊಬ್ಬರ ಮದುವೆ, ಮುಂಜಿ, ಪ್ರಸ್ತ, ಬಾಣಂತನ, ಉಡುಗೊರೆ, ಆರತಿ, ಅಕ್ಷತೆ········ಕಲಾಪಗಳು. ಅಳಿಯಂದಿರ ಮತ್ತು ಮಗನ ಓದಿಗೆ ಹೇರಳವಾದ ಹಣವನ್ನು ಸುರಿದರು.

ಅಂತೂ ಇಂತೂ ಸಾಲ ಏರುತ್ತಲೇ ಇತ್ತು. ತೀರಿಸುವ ಉಪಾಯವೇ ಇರಲಿಲ್ಲ. ಆಯಕ್ಕಿಂತ ವ್ಯಯ ಹೆಚ್ಚು. ಸೆಟ್ಟರು ಆರಾಮಾಸನ (easy-chair) ದ ಮೇಲೆ ಒರಗಿಕೊಂಡು ಯೋಚಿಸುತ್ತಿದ್ದರು: "ಏನು ಒಂದು ಮುಂಜಿಗೆ ಐನೂರು ರೂಪಾಯಿಯಾದರೂ ಬೇಕು. ಕನಿಷ್ಠ ಪಕ್ಷ ಅಷ್ಟು ಬೇಡವೆ? ಮೂವರು ಹೆಣ್ಣುಮಕ್ಕಳನ್ನೂ, ಅಳಿಯಂದಿರನ್ನೂ ರೈಲು ಛಾರ್ಜು ಕೊಟ್ಟು ಕರೆಯಿಸಿಕೊಳ್ಳಬೇಕು. ಲಗ್ನಪತ್ರಿಕೆ ಪ್ರಿಂಟ್ ಮಾಡಿಸ ಬೇಕು. ಅವನ್ನೆಲ್ಲಾ ಎಲ್ಲಾರ್ಗೂ ಪೋಸ್ಟ್ ಮಾಡಬೇಕು. ನನ್ನ ಮಗನ ಉಪನಯನ ಎಂದ ಮೇಲೆ ಸೆಟ್ಟರುಗಳು, ಸ್ನೇಹಿತರು, ಸರ್ಕಾರಿ ಅಧಿಕಾರಿಗಳು......ಎಲ್ಲರನ್ನೂ ಕರೆಯಿಸಿಕೊಳ್ಳಬೇಕು. ಅವರೆಲ್ಲಾ ಬಂದಾಗ ಏನೋ ಕಾಟಾಚಾರಕ್ಕೆ ಆಯಿತೂಂತ ಅನ್ನಿಸಿಬಿಡುವುದಕ್ಕಾಗುತ್ತದೆಯೆ? ಲಾಡು ಚಿರೋಟಿ ಊಟವಾಗಬೇಕು. ಒಂದೊಂದು ದಿನ ಒಂದೊಂದು ತರಹ ಭಕ್ಷ್ಯವಾಗಬೇಕು. ಸಂಗೀತ, ನಾಚು ಎಲ್ಲಾ ಆಗಬೇಕು. ಅದಕ್ಕೆಲ್ಲಾ ದುಡ್ಡು ತೆರಬೇಕು. ಇದೇ ಸಮಯದಲ್ಲಿ ನನ್ನ ಹೆಂಡತಿ ಒಂದು ವಜ್ರದ ಮೂಗುಬಟ್ಟು ಮಾಡಿಸಿಕೊಡಬೇಕೂಂತ ಕೇಳ್ತಾ ಇದ್ದಾಳೆ. ವಾಸೂ ಬೇರೆ ಒಂದು ಬೈಸಿಕಲ್ ತೆಗೆದುಕೊಡಪ್ಪಾಂತ ಹಟ ಹಿಡಿದಿದ್ದಾನೆ. ರಾಮೂಗೆ ಬಟ್ಟೆ ಹೊಲಿಸಬೇಕು. ಸೊಸೆಗೆ ಒಂದು ಜೊತೆ ವಜ್ರದ ಬೆಂಡೋಲೆ, ಈಗಿರೋದನ್ನು ಬಿಚ್ಚಿಸಿ ಬೇರೆ ಮಾದರೀಲಿ ಮಾಡಿಸಿಕೊಡ ಬೇಕು. ಕಿರಿಯವಳು ಐವತ್ತು ರೂಪಾಯಿ ಕಳುಹಿಸಿಕೊಟ್ಟರೂಂತ ಬರೆದಿದ್ದಾಳೆ" ಎಂದು ಚಿಂತಿಸಿ, "ಇಷ್ಟಕ್ಕೂ ಐನೂರು ರೂಪಾಯಿ ಸಾಕೆ?" ಎಂದು ತಮಗೆ ತಾವೇ ಪ್ರಶ್ನಿಸಿಕೊಂಡರು. ಯೋಚನೆ ಮಾಡೀ ಮಾಡೀ ಅವರ ತಲೆಯೆಲ್ಲಾ ಕೆಟ್ಟುಹೋಯಿತು. ಸದ್ಯಕ್ಕೆ ಅವರ ಕೈಯಲ್ಲಿ ಮುನ್ನೂರು ರೂಪಾಯಿದ್ದಿತು. ಅಷ್ಟರಲ್ಲಿ ಏನು ಮಾಡುವುದು? ಏನು ಬಿಡುವುದು?

* * *

ಎರಡು ದಿನವಾಯಿತು. ಲಗ್ನಪತ್ರಿಕೆ ಪ್ರಿಂಟೂ ಆಯಿತು. ಎಲ್ಲರಿಗೂ ಕಳುಹಿಸಿಕೊಟ್ಟದ್ದೂ ಆಯಿತು. ಸೆಟ್ಟರಿಗೆ, ಊಟಮಾಡಿ ತಾಂಬೂಲ ವನ್ನು ಮೆಲ್ಲುತ್ತಿದ್ದಾಗ ಒಂದು ಯೋಚನೆಯುಂಟಾಯಿತು.—'ಸಾಮಾನ್ಯ

ವಾಗಿ ಉಪನಯನಕ್ಕೆ ಬಂದವರೆಲ್ಲರೂ ಏನಾದರೂ ಓದಿಸಿಕೊಡುವ ಸಂಪ್ರದಾಯವಿದೆಯಷ್ಟೆ. ಕನಿಷ್ಠಪಕ್ಷ ಆರುನೂರು ಜನರಾದರೂ ಬಂದೇ ಬರುತ್ತಾರೆ. ಪ್ರತಿಯೊಬ್ಬರೂ ಹುಡುಗನಿಗೆ ಒಂದು ಜೊತೆ ಪಂಚೆಯನ್ನೋ, ಧೋತ್ರವನ್ನೋ, ಬೆಳ್ಳಿಯ ಲೋಟವನ್ನೋ, ಪಂಚಪಾತ್ರೆಯನ್ನೋ, ತಟ್ಟೆಯನ್ನೋ, ಪುಸ್ತಕ ಫೌಂಟನ್‌ಪೆನ್ ಮೊದಲಾದುವನ್ನೋ ಓದಿಸುತ್ತಾರೆ. ಅಲ್ಲದೆ ವಟುವಿನ ತಾಯಿಗೂ ಖಣ, ಸೀರೆ ಏನಾದರೂ ಕೊಡುತ್ತಾರೆ. ತನಗೂ ಏನಾದರೂ ಕೊಟ್ಟೇ ಕೊಡುತ್ತಾರೆ. ಆರುನೂರು ಜನಕ್ಕೆ ಐನೂರು ಜನ ಹೋಗಲಿ, ನಾನ್ನೂರೈವತ್ತು ಜನ ಉಡುಗೊರೆ ಕೊಡಲಿ. ಅವರೆಲ್ಲಾ ಹದಿನೈದು ಇಪ್ಪತ್ತು ಇಪ್ಪತ್ತೈದು ರೂಪಾಯಿನ ಸಾಮಾನೇ ಕೊಡುತ್ತಾರೆ. ಆದರೂ ಲೆಕ್ಕಕ್ಕೆ ಸರಾಸರಿ ಐದು ರೂಪಾಯಿ ಇಟ್ಟುಕೊಳ್ಳೋಣ. ಎರಡು ಸಾವಿರದೈನೂರು ರೂಪಾಯಾಗುತ್ತದೆ. ಬಂದವರಿಗೆಲ್ಲಾ ಚೆನ್ನಾಗಿ ಲಾಡು, ಚಿರೋಟಿ, ಜಿಲೇಬಿ ಊಟ ಹಾಕಿಸಿ, ಸಂಗೀತ ನಾಚು ಎಲ್ಲ ಏರ್ಪಾಡು ಮಾಡಿಬಿಟ್ಟರೆ ಅವರಿಗೆಲ್ಲಾ ತುಂಬ ಸಂತೋಷವಾಗಿ ತುಂಬ ಬೆಲೆ ಬಾಳುವ ಉಡುಗೊರೆ ಓದಿಸುತ್ತಾರೆ. ನನಗೆ ಹೆಚ್ಚೆಂದರೆ ಸಾವಿರ ರೂಪಾಯಿ ಬಿದ್ದೀತು. ಆದರೆ ಬಂದವರಿಂದ ಉಡುಗೊರೆಗಳ ಸಾಮಾನೇ ಎರಡು ಸಾವಿರದೈನೂರಾಗುತ್ತೆ. ತಮಗೆ ಸಾವಿರದೈನೂರು ರೂಪಾಯಿನಷ್ಟು ಲಾಭ. ಅದಕ್ಕೂ ಹೆಚ್ಚೇ ಗಿಟ್ಟುತ್ತೇ.''

ಸೆಟ್ಟರು ಸೀತಾಲಕ್ಷ್ಮಮ್ಮನವರಿಗೆ ಹೇಳಿದರು :—''ಲೇ ನೋಡೇ, ಈ ಮುಂಜಿಗೆ ಸುಮಾರು ಆರುನೂರು ಜನ ಬರುತ್ತಾರೆ. ಒಟ್ಟಿನಲ್ಲಿ ಎಲ್ಲಾ ಕನಿಷ್ಠಪಕ್ಷ ಐದಾರು ರೂಪಾಯಿ ಬೆಲೆಬಾಳುವಂತಹುದು—ಕೊಟ್ಟರೆ—ಕೊಡುತ್ತಾರೆಂದು ಇಟ್ಟುಕೊಳ್ಳೋಣ. ಎಷ್ಟು ಬೆಳ್ಳಿಯ ಬಟ್ಟಲುಗಳು, ಲೋಟಾಗಳು, ತಟ್ಟೆಗಳು, ಪಂಚಪಾತ್ರೆಗಳು, ಉದ್ಧರಣೆಗಳು, ಚೊಂಬು ಗಳು ಎಲ್ಲಾ ಬರುತ್ತವೆ? ಲೆಕ್ಕವಿಲ್ಲದಷ್ಟು. ಆಮೇಲೆ ಸೀರೆ, ಕುಪ್ಪಸದ ಬಟ್ಟೆಗಳು? ನನಗೆಷ್ಟು ಪಂಚೆ ವಲ್ಲಿಗಳು ಬರುತ್ತವೆ? ಹುಡುಗನಿಗೆಷ್ಟು ಪಂಚೆ, ವಲ್ಲಿ, ಧೋತ್ರ, ಫೌಂಟನ್‌ಪೆನ್‌ಗಳು ಬರುತ್ತವೆ? ಯಾರೂ ಐದು ರೂಪಾಯಿಗಿಂತ ಕಡಮೆ ಸಾಮಾನು ಕೊಡೋಲ್ಲ. ಎಲ್ಲಾ ಮಾರಿಬಿಟ್ಟರೆ, ಉಪನಯನದ ಖರ್ಚು ಕಳೆದು, ಎರಡು ಸಾವಿರ ರೂಪಾಯಿಗಳಿಗೆ

ಮೇಲ್ಪಟ್ಟು ಲಾಭ ಬರುತ್ತದಲ್ಲೇ. ನಾವು ಸಾಲಾನಾದರೂ ಮಾಡಿ ಜೋರಾಗಿ ಮುಂಜಿ ಮಾಡೋಣ."

ಮುಂಜಿಯ ದಿನವೂ ಬಂದಿತು. ಆಹ್ವಾನಿತರೆಲ್ಲಾ ದಯಮಾಡಿಸಿದರು. ಸೆಟ್ಟರ ಮನೆಯು ಹಸುರಾದ ತಳಿರು ತೋರಣಗಳಿಂದಲೂ, ಬಾಳೆಯ ಕಂಭಗಳಿಂದಲೂ, ರಂಗವಲ್ಲಿ ಸಾರಣೆಕಾರಣೆಗಳಿಂದಲೂ, ಹೂವು ಚಿಗುರುಗಳಿಂದ ಸಿಂಗರಿಸಿದ ಮಂಟಪಗಳಿಂದಲೂ ಅಲಂಕೃತವಾಯಿತು. ಜರಿಯ ಪೇಟಾ, ಜರಿಯ ಪಂಚೆ, ಜರತಾರಿಯ ಧೋತ್ರ, ವಲ್ಲಿ, ಜರತಾರಿಯ ಸೀರೆ, ಜರಿಯ ಲಂಗ ಮತ್ತು ಚಿನ್ನದ ಡಾಬು, ರತ್ನದ ಉಂಗುರ, ವಜ್ರದ ಬೆಂಡೋಲೆ, ಪಚ್ಚೆಯ ಪದಕಸರ, ವಜ್ರ ಕೆಂಪುಗಳ ಮೂಗುತಿ, ಚಿನ್ನದ ಬಳೆಗಳು, ಸರಗಳು ಮೊದಲಾದುವುಗಳ ಮೆರೆದಾಟಕ್ಕೆ ಮೊದಲಾಯಿತು. ಬಿಳಿ, ಕೆಂಪು, ಹಳದಿ, ನೀಲಿ, ಹಸುರು, ಮುಗಿಲುಬಣ್ಣ.... ಮೊದಲಾದ ವಿವಿಧ ರಾಗರಂಜಿತವಾದ ಸೀರೆಗಳ ಪರದಾಟ, ಬಳೆಗಳ ಸದ್ದು ಮುಂಜಿಯ ಮನೆಯಲ್ಲಿ ಎಲ್ಲರ ಗಮನವನ್ನು ಸೆಳೆಯುತ್ತಿತ್ತು.

ಈ ದಿನವೇನು ಲಾಡು, ರಾತ್ರಿ ಚಿರೋಟಿ; ಇವತ್ತು ಬೆಳಗ್ಗೆ ಜಿಲೇಬಿ. ರಾತ್ರಿ ಪೂರಿ, ಈ ಮಧ್ಯಾಹ್ನ ಕೇಸರಿಭಾತು, ವಾಂಗೀಭಾತು, ರಾತ್ರಿ ಮಂಡಿಗೆ.........ದಿನ ದಿನವೂ ರುಚಿರುಚಿಯಾದ ಭಕ್ಷ್ಯಭೋಜ್ಯಗಳು. ಈ ದಿನ ವರದರಾಜೈಯ್ಯಂಗಾರ್ಯರ ಸಂಗೀತ, ನಾಳೆ ವೆಂಕಟಸುಬ್ಬಾಶಾಸ್ತ್ರಿಗಳ ವೀಣಾವಾದನ, ನಾಡಿದ್ದು ಮತ್ತೊಬ್ಬರದು; ಇವೊತ್ತು ಕಮಲಾಸಾನಿಯ ನರ್ತನ, ನಾಳೆ ರತ್ನಾಸಾನಿಯ ನಾಚು, ನಾಡಿದ್ದು ಇನ್ನೊಬ್ಬಳದು. ದಿನದಿನವೂ ನಾಲಗೆಗೆ ಸವಿಯಾದ ತಿಂಡಿ ತಿನಸುಗಳು, ಕಣ್ಣಿಗೆ ಸೊಗಸಾದ ನಾಚು ನರ್ತನಗಳು, ಕಿವಿಗೆ ಹಿತಕರವಾದ ಗಾಯನಗಳು, ರಾಜೋಪಚಾರಗಳು ನಡೆಯುತ್ತಿವೆ. ಬಂದವರು ತೃಪ್ತರಾದುದರಲ್ಲಿ ಸಂಶಯವೇ ಇಲ್ಲ.

ನಾವು ಬಗೆಯುವುದೊಂದು, ಅದಾಗುವುದಿನ್ನೊಂದು. ಜರಿಯ ಪೇಟ, ಜರಿಯ ಸೀರೆಗಳೂ, ರತ್ನದುಂಗುರ ವಜ್ರದ ಬೆಂಡೋಲೆಗಳೂ, ಊಟ ತಿಂಡಿ ಕಾಫಿಯ ಸಮಾರಾಧನೆಯ ಕಾಲದಲ್ಲಿ ಸಂಗೀತ. ನಾಚು, ನರ್ತನಗಳ ಆ ಕಾಲದಲ್ಲಿ ಮಾತ್ರ ಹಾಜರು ಇರುತ್ತಿದರು. ಆದರೆ

ಉಡುಗೊರೆ ಕೊಡುವ ಕಾಲದಲ್ಲಿ ಗೈರುಹಾಜರು. ಆ ಕಾಲದಲ್ಲಿ ಒಬ್ಬೊಬ್ಬರೂ ಒಂದೊಂದು ನೆವ ಹೇಳಿ ತಪ್ಪಿಸಿಕೊಳ್ಳುತ್ತಿದ್ದರು. ಆಗ ಭಂಗಾರ ಸೆಟ್ಟರು, ಸೀತಾಲಕ್ಷ್ಮಮ್ಮ, ಮುಂಜಿಯ ಹುಡುಗ ಮಾತ್ರ ಇರುತ್ತಿದ್ದರು. ಪುರೋಹಿತರು ಮಾತ್ರ ತಮ್ಮ ಹೆಸರಿನಲ್ಲಿ ಎಂಟಾಣೆಯ ಪಂಚೆಯೊಂದನ್ನು ಓದಿಸಿದರು! ಸೆಟ್ಟರ ಮುಖ ಸಪ್ಪಗಾಯಿತು. ಕನಿಷ್ಠ ಕುಮಾರನ ಉಪನಯನ ಮಹೋತ್ಸವದ ಖರ್ಚು ಸಾವಿರದೈನೂರು ರೂಪಾಯಿಗಿಂತ ಸ್ವಲ್ಪ ಹೆಚ್ಚಾಗಿತ್ತು.

ಭಂಗಾರ ಸೆಟ್ಟರು "ಎಲ್ಲರೂ ಉಪನಯನದ ಹೊತ್ತಿನಲ್ಲಿರುವುದಿಲ್ಲ. ತಿಂಡಿ, ಕಾಫಿ, ಊಟ, ಸಂಗೀತ, ಕುಣಿತದ ಹೊತ್ತಿನಲ್ಲಿ ಮಾತ್ರ ಇರುತ್ತಾರೆ. ಐದು ದಿನವಾಯಿತು. ಐದು ಕಾಸಿಲ್ಲ. ಹೋಗಲಿ. ಭಾನುವಾರ ಒಂದು ಡಿನ್ನರ್ ಪಾರ್ಟಿಗೆ ಏರ್ಪಾಟು ಮಾಡೋಣ. ರಾತ್ರಿ ಆರತಿ ಇಟ್ಟುಕೊಳ್ಳೋಣ. ಸಾಯಂಕಾಲ, ಆರರಿಂದ ಎಂಟರವರೆಗೆ ರಾಮಾನುಜಂ ಅವರ ಸಂಗೀತ, ರತ್ನಾಸಾನಿಯ ನರ್ತನಗಳಿಗೆ ಏರ್ಪಾಟು ಮಾಡೋಣ. ಎಲ್ಲಾ ಆದಮೇಲೆ ಪುರೋಹಿತರ ಕೈಯಲ್ಲಿ ವಟುವಿಗೆ ಉಡುಗೊರೆ ಓದಿಸೋಣೆಲ್ಲಾ ಓದಿಸಬಹುದು ಎಂದು ಕೂಗಿಸುವುದು. ಒಳ್ಳೆಯ ಉಪಾಯ. ರಾಮಾನುಜಂ ಅವರು ನೂರು ರೂಪಾಯಿಗೆ ಒಂದು ಕಾಸು ಕಡಮೆಯಾದರೂ ಬರುವವರಲ್ಲ. ರತ್ನಾಸಾನಿಯೂ ನೂರು ನೂರೈವತ್ತು ರೂಪಾಯಿ ಕೇಳುತ್ತಾಳೆ. ಮೇಲೆ ಊಟ ತಿಂಡಿಯು ಖರ್ಚು ನೂರು ನೂರೈವತ್ತು. ಅಂತೂ ಒಟ್ಟಿನಲ್ಲಿ ಮುನ್ನೂರೈವತ್ತು ರೂಪಾಯಿಯಾದರೂ ಆಗುತ್ತದೆ. ಆದರೆ ಏನು ಮಾಡುವುದು? ಎರಡು ಮೂರು ಸಾವಿರ ರೂಪಾಯಿಗಳ ಸಾಮಾನು ಬರುವಾಗ ಈ ಅಲ್ಪ ಖರ್ಚುಗಳಿಗೆ ಹಿಂತೆಗೆದರಾದೀತೆ?" ಎಂದೆಣಿಸಿದರು.

ಎಲ್ಲರಿಗೂ ಡಿನ್ನರ್ ಪಾರ್ಟಿಗೆ ಬರಬೇಕೆಂದು ಒಂದೊಂದು ಕಾರ್ಡು ಕೊಟ್ಟರು. ಅವತ್ತಿನ ಅಡಿಗೆ ಜಿಲೇಬಿ, ವಾಂಗಿಭಾತ್, ಹಾಲುಖೀರು, ಬೋಂಡ, ಬೂದುಗುಂಬಳಕಾಯಿ ಮಜ್ಜಿಗೆ ಹುಳಿ, ಹುರುಳಿಕಾಯಿ ಪಲ್ಯ, ಬದನೆಕಾಯಿ ಹುಳಿ‥‥‥ಇತ್ಯಾದಿ. ಪುಷ್ಕಳ ಭೋಜನ. ಯಾರೂ ಊಟಕ್ಕೆ ಬರುವುದನ್ನು ತಪ್ಪಿಸಿಕೊಳ್ಳಲಿಲ್ಲ. ಸೆಟ್ಟರು ತಮ್ಮ ಪುರೋಹಿತರ

ಕೈಯಲ್ಲಿ "ವಟುವಿಗೆ ಉಡುಗೊರೆ ಕೊಡುವವರೆಲ್ಲಾ ಈಗ ಕೊಡಬಹುದು" ಎಂದು ಹೇಳಿಸಿದರು. ಅರ್ಧಕ್ಷಣ ಸಭೆ ಸ್ತಬ್ಧವಾಗಿತ್ತು. ಯಾರೂ ಉಡುಗೊರೆ ಕೊಡುವ ಸೂಚನೆ ಕಾಣಿಸಲಿಲ್ಲ. ಕೇಶವಸೆಟ್ಟರು ಮೆಲ್ಲಗೆದ್ದು "ಓ, ಹನ್ನೆರಡು ಘಂಟೆಯಾಯಿತಲ್ಲವೆ. ಈವತ್ತು ಲಾಲ್‌ಬಾಗಿಗೆ ಬೇರೆ ಹೋಗಬೇಕು" ಎಂದು ಗಟ್ಟಿಯಾಗಿ ಹೇಳುತ್ತಾ ಸಭಾಮಂದಿರವನ್ನು ವಿಸರ್ಜಿಸಿ, ಎಲ್ಲರಿಗೂ ಒಂದು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು. ಇತರರೂ ಅವರ ಉದಾಹರಣೆಯನ್ನು ಅನುಸರಿಸಿದರೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ.

ಆದರೂ ಇನ್ನೂ ಸೆಟ್ಟರಿಗೆ ರಾತ್ರಿ ಒಂದು ಅವಕಾಶವಿದೆಯಲ್ಲಾ, ಆಗಲಾದರೂ ಏನಾದರೂ ಕೊಟ್ಟಾರು ಎಂಬ ಆಸೆ ಭರವಸೆಗಳುಳಿದಿದ್ದವು.

ಸಾಯಂಕಾಲದ ಹೊತ್ತಿಗೆ ಸರಿಯಾಗಿ ಎಲ್ಲರೂ ಬಂದರು. ವಟುವೂ, ವಾಸುವಿನ ತಾಯ್ತಂದೆಗಳೂ ಹಸೆಯ ಮಣೆಯ ಮೇಲೆ ಕುಳಿತುಕೊಂಡರು. ಸುಮಂಗಲಿಯರು ಅವರಿಗೆ ಆರತಿಯೆತ್ತಿದರು. ಅನಂತರ ರಾಮಾನುಜಂ ಅವರ ಗಾಯನವು ಆರಂಭವಾಯಿತು, ಅಮರಗಾನ. ಎಲ್ಲರೂ ತಲೆದೂಗುತ್ತಾ, ಗಾಯಕರನ್ನೂ ಸೆಟ್ಟರನ್ನೂ ಪ್ರಶಂಸಿಸುತ್ತಾ ಗಾನಸಭೆಯಲ್ಲಿ ತಲ್ಲೀನರಾಗಿ ಕೇಳುತ್ತಾ ಕುಳಿತಿದ್ದರು. ಎರಡು ಗಂಟೆ ಎರಡು ನಿಮಿಷಗಳಂತೆ ಕಳೆದುಹೋಯಿತು. ಆ ಸಂಗೀತವನ್ನು ಕೇಳಿ ಆನಂದಿಸದ ಹೃದಯವೇ ಅಲ್ಲಿರಲಿಲ್ಲ. ಸಂಗೀತದ ಶ್ಲಾಘನೆಯನ್ನು ಕೇಳಿ ಸೆಟ್ಟರ ಭರವಸೆ ದೃಢವಾಯಿತು.

ಅನಂತರ ನರ್ತನವು ಮೊದಲಾಯಿತು. ರತ್ನಾಸಾನಿಯ ಜಿಂಕೆಯ ಕಾಲಿನಂತಿರುವ ಆ ಕಾಲುಗಳ ಕುಣಿತ, ಅಂಗಾಂಗಗಳ ಮಣಿತ, ಆ ಹಾವ ಭಾವ ವಿಲಾಸಗಳು, ಮನೋಹರವಾದ ಗಾನ, ಹಾಡುಗಾರಿಕೆಗೆ ತಕ್ಕಂತೆ ತಾಳಗತಿಯನ್ನನುಸರಿಸಿದ್ದ ಪಾದಗಳ ವಿವಿಧ ವಿನ್ಯಾಸಗಳು — ಅಂತೂ ಒಟ್ಟಿನಲ್ಲಿ ಒಂದು ಮೋಹಕವಾದ ಕನಸಿನಂತೆ ಇದ್ದುವು. ಈಗಲಾದರೂ ಏನಾದರೂ ಉಡುಗೊರೆ ಬಂದೀತೇನೋ ಎಂಬ ಪ್ರತ್ಯಾಶೆಯಿಂದ ಕಡೆಯಲ್ಲಿ ಯಾರಾದರೂ ಓದಿಸಬಹುದೆಂದು ಪುರೋಹಿತರ ಮೂಲಕ ಸೂಚಿಸಿದರು.

ಕೋದಂಡರಾಮ ಸೆಟ್ಟರು ಗಡಿಯಾರದ ಕಡೆ ನೋಡಿ ಹೊತ್ತಾಯಿತೆಂದು ಹೇಳಿಕೊಂಡು ಠೀವಿಯಿಂದ ಹೆಜ್ಜೆಯಿಕ್ಕುತ್ತಾ ಹೊರಟುಹೋದರು. ಉಳಿದವರೂ ಸೆಟ್ಟರಿಗೆ ಅಭಿವಂದನೆಗಳನ್ನು ಸಲ್ಲಿಸಿ ಹೊರಹೊರಟರು. ಸೆಟ್ಟರು ತಲೆಯ ಮೇಲೆ ಕೈಹೂತ್ತು ಕುಳಿತುಬಿಟ್ಟರು.

ಉಪನಯನಕ್ಕೋಸ್ಕರ ಖರ್ಚುಮಾಡಿದ್ದು ಸಾಲದೆ ಕೊಸರಿಗೆ ಬೇರೆ ಸಂಗೀತಕ್ಕೆ ಏರ್ಪಾಟು ಮಾಡಿದಂತಾಯಿತು. ಆಮೇಲೆ ಸೆಟ್ಟರಿಗೆ ಬುದ್ಧಿ ಬಂತು.

* * *

ಹತ್ತು ವರ್ಷಗಳ ನಂತರ ಶ್ರೀನಿವಾಸನಿಗೆ ಪಶ್ಚಿಮವಾಹಿನಿಗೆ ಹೋಗಿ ಹತ್ತು ರೂಪಾಯಿನಲ್ಲಿ ಉಪನಯನ ಆಯಿತೂ ಅಂತ ಅನ್ನಿಸಿಕೊಂಡು ಬಂದರೆಂದು ಗಾಳಿಯ ಸುದ್ದಿ.

ಊರಿನಿಂದ ಹಿಂತಿರುಗಿ ಬಂದಮೇಲೆ ಕೋದಂಡರಾಮ ಸೆಟ್ಟರು ಸ್ವಲ್ಪ ಅಣಕದ ಧ್ವನಿಯಿಂದ ಕೇಳಿದರು: "ಏನು ಸೆಟ್ಟರೆ, ಶ್ರೀನಿವಾಸನ ಉಪನಯನ ಮಹೋತ್ಸವ ಯಾವಾಗ?"

"ಮೊನ್ನೆ ಪಶ್ಚಿಮವಾಹಿನಿಯಲ್ಲಿ ಆಯಿತು" ಎಂದರು ಸೆಟ್ಟರು.

# ಗಿರಣಿಯ ಕೂಲಿ

"Workers ಎಲ್ಲಾ Strike ಮಾಡ್ತಾರಂತೆ ಹೌದೇನು?"

"ಯಾರು ಹೇಳಿದರು ನಿನಗೆ?"

"ಮಿಸೆಸ್ ಓಂಕಾರ್‌ನಾಥ್ ಹೇಳಿದರು. ಮನೆಗೆ ಬಂದ ತಕ್ಷಣ ಗಿರಣೀಲಿ, ಯೂನಿಯನ್ ಮೀಟಿಂಗ್‌ನಲ್ಲಿ ಏನೇನಾಯಿತೋ ಅದನ್ನೆಲ್ಲಾ ಅವರ ಕೈಲಿ ಹೇಳಿಕೊಂಡ ಹೊರತೂ ಆತನಿಗೆ ಸಮಾಧಾನವಿರೊಲ್ವಂತೆ."

"ಅಯ್ಯೋ ಪಾಪ! ಆತನಿಗೆ ಇನ್ನೇನೂ ಬೇರೆ ಕೆಲಸವಿಲ್ಲವೇನೋ?"

ಹೇಮಂತನ ಮಾತಿನೊಳಗಿನ ವ್ಯಂಗ್ಯವನ್ನು ಗಮನಿಸದವಳಂತೆ ಮಾಲತಿ ಉತ್ಸುಕತೆಯಿಂದ ಕೇಳಿದಳು—"ಸ್ಟ್ರೈಕ್ ಆದರೆ ನೀವೂ ಸೇರುತ್ತೀರೇನು ಸ್ಟ್ರೈಕ್‌ನಲ್ಲಿ?"

"ಹ್ಞೂಂ, ಮತ್ತೆ. ಮೆಜಾರಿಟಿ ಹೇಗೆ ಮಾಡುತ್ತೋ ಹಾಗೆ...."

"ಗಿರಣೀಲಿ, ಯೂನಿಯನ್‌ನಲ್ಲಿ ಏನಾದರೂ ಉಳಿದೋರಿಗಿಂತ ಮುಂಚೆ ನಿಮಗೆ ಗೊತ್ತಾಗುತ್ತೆ. ಆದರೂ ನನಗೆ ಇನ್ಯಾರಾದರೂ ಹೇಳಿದಾಗಲೇ ಹೊರಗಿನ ಪ್ರಪಂಚದ ಸುದ್ದಿ ಗೊತ್ತಾಗೋದು. ನೀವು ಮನೇಲಿ ಬಾಯೇ ಬಿಡೋಲ್ಲ. ನಿಮಗೆ ನಾನೊಂದು ಕಟಿ ಪದಾರ್ಥ."

"ಹುಚ್ಚೀ, ಹುಚ್ಚೀ, ಅವರು ಸ್ಟ್ರೈಕ್ ಆಗುತ್ತೇಂತ ಹೇಳಿದರೆ? ಹಾಗೆಲ್ಲಾ ಸ್ಟ್ರೈಕ್ ಮಾಡಬಾರದು. ಪಂಡಿತ್ ನೆಹ್ರೂ ಅವರು ಈ ಸಂಧಿಕಾಲದಲ್ಲಿ ವೈಯಕ್ತಿಕ ಸ್ವಾರ್ಥದಮೇಲೆ, ಲಾಭದಮೇಲೆ ದೃಷ್ಟಿಯಿಟ್ಟು Strike ಮಾಡುವುದು ದೇಶದ್ರೋಹವಾದೀತು. Productions of Essential Goods ನ್ನು ಹೆಚ್ಚುಮಾಡಬೇಕು. ಆಹಾರದ ಬೆಳೆ ಹೆಚ್ಚಿಸಬೇಕು ಅಂತಾ ಸಾರಿ ಸಾರಿ ಹೇಳ್ತಾ ಇರೋವಾಗ ನಾವು Strike ಮಾಡೋದು ಸುತರಾಂ ಸರಿಯಲ್ಲ. ಈ ಯೂನಿಯನ್ ಎಲ್ಲೋ ಶುದ್ಧ ಹುಡುಗುಪಾಳೆಯ. ಬುದ್ಧಿಯಿಲ್ಲ, ಬುದ್ಧಿಯಿಲ್ಲಾ ಅಂತ ಒಂದು ಸಣ್ಣ ಲೆಕ್ಚರ್ ಕೊಡೋದುಬಿಟ್ಟು, Mrs. ಓಂಕಾರನಾಥ್ ಹೇಳಿದುದೆಲ್ಲಾ ಬೆಪ್ಪು

ತಕಡೀ ಹಾಗೆ ಕೇಳುತ್ತಾ ಕೂತಿದ್ದೆಯೋ ಇಲ್ಲವೊ?" ಷಾಷೂಷಾ ತಿನ್ನುತ್ತಾ ಹೇಳಿದ ಹೇಮಂತ.

"ನಾನು ಅವರಿಗೆ ಉಪದೇಶಮಾಡಿದರೆ ಏನಾದ ಹಾಗಾಯಿತು? ಇದ್ದೀರಲ್ಲಾ, ಬುದ್ಧಿವಂತರು ನೀವು, ನಿಮ್ಮ ಯೂನಿಯನ್‌ಗೆ ಹೇಳಿ. ಯೂನಿಯನ್ನಿನ ಕೋಶಾಧ್ಯಕ್ಷರು, Working Committee ಸದಸ್ಯರು ಏನೇನೋ ಆಗಿದ್ದೀರಲ್ಲಾ" ಎಂದು ಕೋಪದಿಂದ ನುಡಿದು ಬಿರಬಿರನೆ ಅಡಿಗೆಯ ಮನೆಗೆ ಹೊರಟುಹೋದಳು.

* * *

ಮಾಲತಿ ಮತ್ತೆ ಕೋಣೆಗೆ ಬಂದಾಗ ಸಂಜೆ ಏಳು ಗಂಟೆಯಾಗಿತ್ತು. ಹೇಮಂತ ಯಾವುದೋ ಗಿರಣಿಯ ಕಾಗದಪತ್ರಗಳ ಅವಲೋಕನದಲ್ಲಿ ತನ್ಮಯನಾಗಿದ್ದನು. ಅವಳ ಎರಡು ವರ್ಷದ ಮಗು ಸುದರ್ಶನ ಮೇಜಿನ ಮೇಲೆ ಅಂದವಾಗಿ ಜೋಡಿಸಿಟ್ಟಿದ್ದ ಪುಷ್ಪಪಾತ್ರೆಯನ್ನು ಹೇಗೋ ಎಟುಕಿಸಿ ಕೊಂಡು ಹೂವುಗಳನ್ನು ದಳದಳವಾಗಿ ಕೀಳುತ್ತಿದ್ದನು. ಹೇಮಂತನ Writing Table ಮೇಲಿಟ್ಟಿದ್ದ ಕಾಫಿ ಆರಿಹೋಗಿತ್ತು. ಹೇಮಂತನಿಗೆ ಅದಾವುದರ ಪರಿವೆಯೂ ಇರಲಿಲ್ಲ. ಅವನಿಗೆ ಮಾಲತಿಯ ಆಗಮನದ ಅರಿವೂ ಆಗಲಿಲ್ಲ.

ಮಾಲತಿ ಮಗುವಿನ ಕೈಯಿಂದ ಪುಷ್ಪಪಾತ್ರೆಯನ್ನು ಕಿತ್ತುಕೊಂಡು ನುಡಿದಳು—" ಇಲ್ಲಿ ನೋಡಿ, ನಿಮ್ಮ ಸುಪುತ್ರ ಮಾಡಿರೋ ಅವಾಂತರಾನ. ಸದ್ಯಃ, ಪುಣ್ಯಕ್ಕೆ ಗಾಜಿನ ಫ್ಲವರ್‌ವೇಸ್ ಒಡೆಯಲಿಲ್ಲ. ಇಲ್ಲದಿದ್ದರೆ ಎರಡೂವರೆ ರೂಪಾಯಿ ಛಟ್ ಆಗುತ್ತಿತ್ತು."

ಹೇಮಂತ ಒಮ್ಮೆ ತಿರುಗಿ ನೋಡಿ ಮತ್ತೆ ತನ್ನ ಕೆಲಸದಲ್ಲಿ ತೊಡಗಿದನು. ಸುದರ್ಶನ ಹೂವಿನಪಾತ್ರೆ ಬೇಕೆಂದು ಅಳತೊಡಗಿದನು. ಅವನನ್ನು ಎತ್ತಿಕೊಂಡು ತನ್ನ ನಳಿದೋಳಿನಲ್ಲಿ ತೂಗಿ ರಮಿಸುತ್ತಾ ಹೇಮಂತನ ಬಳಿಗೆ ಬಂದು ಮೃದುಸ್ವರದಲ್ಲಿ ಹೇಳಿದಳು—" ಏನು ಹಾಳು ಆಫೀಸು ಕೆಲಸವೋ? ಮನೆಗೆ ಬರುವಾಗ ಕೂಡ ಒಂದು ಕಂತೆ ಹೊತ್ತುಕೊಂಡು ಬರುತ್ತೀರಿ. ಮನೆಗೆ ಬಂದ ಮೇಲಾದರೂ ಬಿಡುಬೀಸಾಗಿ ಹಾಯಾಗಿರ

ಬಾರದೇ? ಮಕ್ಕಳನ್ನಾದರೂ ಒಂದು ಗಳಿಗೆ ಆಡಿಸಬಾರದೇ? ಸಂಜೆ ಭೂಮಿ ಭಂಗಾರವಾಗುವ ಹೊತ್ತಿನಲ್ಲಿ ಅವನನ್ನು ಎಲ್ಲಿಯಾದರೂ ವಾಕಿಂಗ್ ಕರೆದುಕೊಂಡು ಹೋಗಬಾರದೆ? ನಿಮಗೂ Recreation ಆಗುತ್ತೆ, ಅದೂ ಗೆಲುವಾಗಿರುತ್ತದೆ. ನನಗೂ ಅಡಿಗೆ, ಮನೆಗೆಲಸ ಮಾಡಿಕೊಳ್ಳಲು ಮಕ್ಕಳ ಗಲಭೆಯಿಲ್ಲದೆ ಸುಖವಾಗಿರುತ್ತದೆ. ಸುದರ್ಶನ ನಂತೂ ಮೂರುಹೊತ್ತೂ ಅಪ್ಪಾ, ಅಪ್ಪಾಂತ ಒದ್ದುಕೋತಾನೆ. ನಿಮಗೆ ಮಾತ್ರ....''

"ಹೌದು. ಹೌದು. ಹಾಗೇ ಒಂದಷ್ಟು ಬಂಬ (Boiler)ಕ್ಕೆ ನೀರು ತುಂಬಿದರೆ ಗಿಡಗಳಿಗೆ ನೀರು ಹಾಕಿದರೆ, ಇನ್ನೇನಾದರೂ ಒಂದು ಚೂರೂ ಪಾರೂ ಮನೆಗೆಲಸ ಮಾಡಿಕೊಟ್ಟರೆ ನನಗೂ ವ್ಯಾಯಾಮ ವಾಗುತ್ತೆ, ದೇಹ ಲವಲವಿಕೆಯಾಗಿರುತ್ತೆ. ನಿನಗೂ ಮನೆಗೆಲಸದ ಹೊರೆ ಕಮ್ಮಿಯಾಗುತ್ತೆ. ಅಲ್ವೇ?'' ನಸುನಕ್ಕು ನುಡಿದ ಹೇಮಂತ. ಅವನ ರಿಕ್ತಪರಿಹಾಸ್ಯಕ್ಕೆ ಚಿರಪರಿಚಿತಳಾಗಿದ್ದ ಮಾಲತಿ ಮರುಮಾತಾಡದೆ, ಕಾಫಿ ಯನ್ನು ಮತ್ತೆ ಬಿಸಿಮಾಡಿ ತರಲು ಒಳಗೆ ಹೋದಳು.

* * *

ಸಂಜೆ ಎಂಟು ಎಂಟೂವರೆ ಗಂಟೆಯಾಗಿತ್ತು. ಹೇಮಂತ ಮತ್ತು ಮಕ್ಕಳು ಊಟಕ್ಕೆ ಕುಳಿತಿದ್ದರು. ಬೆಳ್ಳಿಯ ತಟ್ಟೆಯಲ್ಲಿ ಮಲ್ಲಿಗೆಯ ಹೂವಿನಂತೆ ಉದುರುದುರಾದ ಅನ್ನ, ತುಪ್ಪದಲ್ಲಿ ತೋಯ್ದುಹೋಗಿದ್ದ ಬಿಸಿಬಿಸಿ ಪರೋಟ, ಒಂದು ಬಟ್ಟಲಲ್ಲಿ ಗೀಯಾ (ಸೋರೆಯ ಕಾಯಿ)ದ ಕೋಪ್ತ (ಒಂದು ಬಗೆಯ ಪಂಜಾಬಿ ಅಡಿಗೆ) ಬಡಿಸಿತ್ತು.

"ಸಬ್ಜಿ ತುಂಬಾ ಚೆನ್ನಾಗಿದೆ'' ಎಂದ ಹೇಮಂತ.

"ಎಂದೂ ಹೊಗಳದವರು ನೀವಿಷ್ಟು ಬಾಯಿಬಿಟ್ಟು ಹೊಗಳಿದಿರಲ್ಲಾ. ಜನ್ಮ ಸಾರ್ಥಕವಾಯಿತು ಬಿಡಿ'' ಎಂದು ನಸುನಕ್ಕಳು ಮಾಲತಿ.

ಹೇಮಂತ ಅರ್ಧ ಚಪಾತಿಯನ್ನು ಕೂಡಾ ತಿಂದಿರಲಿಲ್ಲ. ಅಷ್ಟರಲ್ಲಿ ಹೊರಗೆ ಯಾರೋ ಕೂಗಿದರು. ಹೇಮಂತ ಎದ್ದುಹೋದನು.

ಹೊರಗೆ ಭರೋ ಎಂದು ಬೀಸುವ ಬಿರುಗಾಳಿ, ಪಕ್ಕದ ಮನೆಯಲ್ಲಿ ಯಾರೋ ಗೋಧೀ ಬೀಸುವ ಸದ್ದು, ಸುದರ್ಶನನ ಕೆಮ್ಮು ಎಲ್ಲ ಸೇರಿ, ಹೊರಗೆ ಬಂದಿದ್ದಾತನೂ, ತನ್ನ ಗಂಡನೂ ಏನು ಮಾತಾಡಿಕೊಂಡರೋ ಗೊತ್ತಾಗಲಿಲ್ಲ.

ಹೇಮಂತ ಒಳಗೆ ಬಂದವನೇ, ಕೈತೊಳೆದು ಬಟ್ಟೆ ಹಾಕಿಕೊಳ್ಳು ವುದನ್ನು ನೋಡಿ ಮಾಲತಿ, "ಏನಿದು ಮತ್ತೆ Mill ಗೆ ಹೋಗಬೇಕೋ ? ಈ ಜನಗಳು ಎಷ್ಟು Inconsiderate—ಅಪ್ಪಾ" ಎಂದಳು.

"ಹ್ಞೂಂ. ಜನರಲ್ ಮ್ಯಾನೇಜರ್ ಹೇಳಿಕಳುಹಿಸಿದ್ದಾರೆ."

"ಎಂಥಾ ಅನ್ನಕಂಟಕರಪ್ಪಾ ಅವರು. ಹಗಲೆಲ್ಲಾ ಗಾಣದೆತ್ತಿನ ಹಾಗೆ ದುಡಿಸಿಕೊಳ್ಳೋದಲ್ದೆ, ರಾತ್ರಿ ಕೂಡಾ ಹಾಯಾಗಿರಲೀಸೋಲ್ಲ. ನಿಮ್ಮ ಸ್ನೇಹಿತರಿಗೆ ದಯವಿಟ್ಟು ಕೊಂಚ ಕೂತ್ಕೋಳ್ಳೀಂತ ಹೇಳ್ತೀನಿ, ನಾನು. ಊಟಾನಾರೂ ಮಾಡಿಕೊಂಡು ಹೋಗೀಂದ್ರೆ."

"ಉಹ್ಞೂಂ. ತಕ್ಷಣ ಬರಬೇಕೂಂತ ಹೇಳಿಕಳ್ಸಿದಾರೆ. ನಾನು ಅವರ್ನ ಕಾಯಿಸೋಕಾಗೋಲ್ಲ."

"ಹೊರಗೆ ಭರೋಂತ ಬೀಸ್ತಾ ಇದೆ ಬಿರುಗಾಳಿ, ಹ್ಯಾಗೆ ಹೋಗು ತ್ತೀರೀಂದ್ರೆ. ಊಟಾ ಮಾಡಿ. ಅಷ್ಟುಹೊತ್ತಿಗೆ ಬಿರುಗಾಳಿಯೂ ಕೊಂಚ ಶಾಂತವಾಗುತ್ತೆ." ವಿನಯ, ದೈನ್ಯಗಳು ಬೆರೆತ ಮೆಲುದನಿಯಲ್ಲಿ ಬೇಡಿ ಕೊಂಡಳು ಮಾಲತಿ.

"Oh, Don't worry my dear. I must go at once. ಸುಮ್ಮನೆ ಎಳನಿಂಬೇಕಾಯಿ ಹಾಗೆ ಆಡಬೇಡ. ನೀನು ಊಟಮಾಡಿ ಮಕ್ಕಳನ್ನೂ ಮಲಗಿಸಿ, ಮಲಗಿಕೊಂಡು ಬಿಡು. Please don't wait for me. ನಾನು ಬರೋದು ಹೊತ್ತಾಗುತ್ತೆ. ಪ್ರಾಯಶಃ ರಾತ್ರಿಯೆಲ್ಲಾ ಅಲ್ಲೇ ಇರಬೇಕಾಗುತ್ತೆ."

ಹೇಮಂತ ಹೊರಗೆ ಹೋಗತೊಡಗಿದುದನ್ನು ನೋಡಿ ಸುದರ್ಶನ ತಾನೂ ಹೋಗಬೇಕೆಂದು ರಾಗ ತೆಗೆದನು.

"ಇವನ ಎದುರಿಗೇ ಹೋಗ್ತಾ ಇದ್ದೀರಿ. ಇನ್ನು ಇವನ್ನ ಸಮಾಧಾನಮಾಡೋಕೆ ನನಗೆ ಒಂದು ಗಂಟೆ ಹಿಡಿಯುತ್ತೆ" ಎಂದು

ಗೊಣಗುಟ್ಟಿದಳು ಮಾಲತಿ. ಅವಳ ಮಾತು ಅವನ ಕಿವಿಗೆ ಬಿತ್ತೋ, ಇಲ್ಲವೋ ಹೊರಟೇ ಬಿಟ್ಟನವನು.

ಗಂಡನಿಗೆ ದಾರಿ ತೋರಿಸಲು ಕೈಯಲ್ಲಿ ಟಾರ್ಚ್ ಹಿಡಿದುಕೊಂಡು, ತಲೆಬಾಗಿಲಲ್ಲಿ ಒಂದು ಗಳಿಗೆ ನಿಂತಿದ್ದಳು ಮಾಲತಿ.

ಇತ್ತ ಸುದರ್ಶನ ತನ್ನನ್ನೂ ಹೊರಗೆ ಕರೆದುಕೊಂಡು ಹೋಗುವಂತೆ ರಚ್ಚೆ ಹಿಡಿದನು. ಅವನನ್ನು ಸಮಾಧಾನಪಡಿಸುವ ಬೇರೆಯ ಉಪಾಯ ಗಾಣದ ಮಾಲತಿ ಅವನನ್ನು ಹೊರಗೆ ಮಾಂಡಕ್ಕೆ ಕರೆದುಕೊಂಡು ಹೋದಳು.

ಹೊರಗಿನ ಕರಾಳ ಕತ್ತಲೆ ಟಾರ್ಚಿನ ಕಿರುಬೆಳಕನ್ನು ಅಣಕಿಸು ತ್ತಿತ್ತು. ಕತ್ತಲೆಂದರೆ ಸುದರ್ಶನನಿಗೆ ಯಾವಾಗಲೂ ಹೆದರಿಕೆ. ಅವನು ಹೆದರಿ ಕಿಟಾರನೆ ಕಿರಚಿಕೊಂಡನು.

ಮತ್ತೆ ಅವನನ್ನು ಕೋಣೆಯೊಳಗೆ ಕರೆದುಕೊಂಡು ಬಂದು ಹಾಲು ಕುಡಿಸಲು ಪ್ರಯತ್ನಿಸಿದಳು. ಅವನು ಹಾಲನ್ನೊಲ್ಲದೆ ಬಟ್ಟಲನ್ನು ರೊಯ್ಯನೆ ತಳ್ಳಿದನು— ಗಾಜಿನ ಬಟ್ಟಲು ಒಡೆದು ಚೂರಾಯಿತು— ಅದೆಷ್ಟೋ ವರ್ಷಗಳ ಹಿಂದೆ ಮಾಲತಿಯ ಪ್ರೇಮಪೂರ್ಣ ಹೃದಯ ಒಡೆದು ಚೂರಾಯಿತು.

ಅವನನ್ನು ಸಮಾಧಾನಪಡಿಸಲು ಮಾಲತಿ ಎಷ್ಟೋ ಉಪಾಯ ಗಳನ್ನು ಮಾಡಿ ಬೇಸತ್ತಳು. ಹಾಲು, ಚಪಾತಿ, ಕಾಬುಲ್ ದ್ರಾಕ್ಷಿ, ರಬ್ಬರ್ ಬೆಲೂನ್, ಆಟದ ಏರೋಪ್ಲೇನು, ಮೋಟಾರು ಯಾವುದೂ ಅವನಿಗೆ ಬೇಡವಾಗಿತ್ತು. ಅಪ್ಪಾ, ಅಪ್ಪಾ, ಅಪ್ಪನ್ಹತ್ರ ಕರ ಕೊಂಡ್ಹೋಗೂ ಎಂಬುದೊಂದೇ ಅವನ ರಾಗವಾಗಿತ್ತು.

ಕಡೆಗೆ ಅವನನ್ನು ತೊಟ್ಟಿಲಲ್ಲಿ ಹಾಕಿ ರಟ್ಟೆ ಬಿದ್ದುಹೋಗುವವರೆಗೆ ಜೋರಾಗಿ ತೂಗಿ ಮಲಗಿಸಿದಮೇಲೆ ಅವನಿಗೆ ನಿದ್ದೆ ಬಂತು. "ಅಪ್ಪಾ, ಅಪ್ಪಾ", ಎಂದು ಆಲಾಪಿಸುತ್ತಲೇ ಅವನು ನಿದ್ರೆಹೋದನು.

ರೂಪಲತಾ ಚಾಪೆಯ ಮೇಲೆಯೇ ಮಲಗಿ ನಿದ್ದೆಹೋಗಿದ್ದಳು. ಮಾಲತಿ ಅವಳನ್ನೆತ್ತಿ ಮಂಚದ ಮೇಲೆ ಮಲಗಿಸಿದಳು. ಅನಂತರ ಕೆಳಗೆ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ, ಒಡೆದುಹೋದ ಗಾಜಿನ ಬಟ್ಟಲ

ಚೂರುಗಳನ್ನೆಲ್ಲಾ ಎತ್ತಿಬಿಸಾಡಿ ಬಟ್ಟೆಯಿಂದ ಹಾಲನ್ನೊರಸಿ, ಮತ್ತೆ ಅಲ್ಲೆಲ್ಲಾ ಡೆಟ್ಟಾಲ್ ಬೆರೆಸಿದ ನೀರನ್ನು ಚಿಮುಕಿಸಿದಳು.

ಇಷ್ಟೆಲ್ಲಾ ಆದಮೇಲೆ ಅವಳು ಊಟಕ್ಕೆ ಕುಳಿತಳು. ಹೇಮಂತ ಊಟಮಾಡದೆ ಬಿಟ್ಟುಹೋದ ಆ ತಟ್ಟೆ ಅವಳನ್ನು ಅಣಕಿಸುತ್ತಿತ್ತು. ದುಃಖ ಒತ್ತರಿಸಿ ಬಂತು. ಅನ್ನ ಗಂಟಲೊಳಗಿಳಿಯದಂತಾಯಿತು.

ಏನಾದರೂ ಓದಿ ತನ್ನ ಅಳಲನ್ನು ಮರೆಯುವಾ ಎಂದು ಆ ವಾರದ 'Delhi News' ಎಂಬ ವಾರ ಪತ್ರಿಕೆಯೊಂದನ್ನು ಕೈಗೆತ್ತಿಕೊಂಡಳು. ಪತ್ರಿಕೆಯ ವಿಷಯವೆಲ್ಲಾ ತೀರ ನೀರಸವಾಗಿ ಕಂಡಿತು. ಅದನ್ನೊತ್ತಟ್ಟಗಿಟ್ಟು 'ಗೋದಾನ' ವೆಂಬ ಹಿಂದೀ ಪುಸ್ತಕವನ್ನು ಕೈಗೆತ್ತಿಕೊಂಡು ಹಾಳೆ ತಿರುಗಿಸಿ ನೋಡತೊಡಗಿದಳು. ಆಕಸ್ಮಾತ್ ಅವಳ ದೃಷ್ಟಿ ಈ ವಾಕ್ಯದ ಮೇಲೆ ಬಿತ್ತು. "ಜೋ ಸ್ತ್ರೀ ಅಪನಾ ಪತೀಕಾ ಮನ್ ಪ್ರಸನ್ನರಕ್ ನ ಸಕೇ, ಜೋ ಅಪನೇಕೋ ಉನ್‌ಕೆ ಮನ್‌ಕೀ ನ ಬನಾ ಸಕೇ, ವಹ್‌ಭೀ ಕೋಯಿ ಸ್ತ್ರೀ ನಹೀ ಹೈ."

ಈ ವಾಕ್ಯವನ್ನೋದಿ ಅವಳು ಒಮ್ಮೆಲೇ ವಿಚಾರಗ್ರಸ್ತಳಾದಳು. ತಾನು ಹೇಮಂತನ ಮನಸ್ಸನ್ನು ಪ್ರಸನ್ನವಾಗಿಟ್ಟಿರುವೆನೇ, ಅವನ ಮನಸ್ಸನ್ನು ಒಲಿಸಿಕೊಂಡಿರುವೆನೇ?

ಊಹ್ಞೂಂ ಇಲ್ಲ. ಹೇಮಂತನ ಮನಸ್ಸನ್ನು ತಾನು ಒಲಿಸಿಕೊಂಡಿದ್ದಿದ್ದರೆ ಅವನಿಗೆ ಗಿರಣಿಯೇ ಹೀಗೆ ಸರ್ವಸ್ವವಾಗುತ್ತಿದ್ದಿಲ್ಲ. ಮನೆಗೆ ಬಂದು ಕಾಫೀ, ತಿಂಡಿಯ ಸೇವನೆಯೊಡನೆ ಕ್ಲಬ್ಬನ್ನೋ, ಇಲ್ಲ, ತನ್ನ ಗೆಳೆಯರನ್ನೋ ಹುಡುಕಿಕೊಂಡು ಹೋಗುತ್ತಿರಲಿಲ್ಲ. ತನ್ನೊಡನೆ ಎಷ್ಟೋ ಅಷ್ಟು ಎಂಬಂತೆ ಬಿಗುವಾಗಿ ಇರುತ್ತಿರಲಿಲ್ಲ. ಅಬ್ಬಾ! ಈಚೀಚೆಗಂತೂ ಅವರು ಮಾತಾಡುವುದೇ ಕಡಮೆ.. ಹತ್ತು ಮಾತಿಗೆ ಒಂದು ಮಾತು ....ಹೇಮಂತ ತುಂಬ ಒಳ್ಳೆಯವ, ನಿಜ. ತನಗೆ ಯಾವ ವಿಧದಲ್ಲೂ ಕಡಮೆಮಾಡಿಲ್ಲ. ಆದರೆ ಅದು ಬರೇ ಕರ್ತವ್ಯಪಾಲನೆ ಆಯಿತು. ಅದು ಅವನ ಹೃದಯದ ಔದಾರ್ಯದ ನಿದರ್ಶನವಾಗಿತ್ತೇ ಹೊರತು ಪ್ರೇಮ ಪ್ರದರ್ಶನವಾಗಿರಲಿಲ್ಲ. ಅಷ್ಟರಿಂದ ಮಾಲತಿಯಂಥ ಹೆಣ್ಣಿಗೆ ತೃಪ್ತಿಯಿರಲಿಲ್ಲ. ಆದರೆ ಅವಳು ಹೇಮಂತನು ಹೇಗಿರಬೇಕೆಂದು

ಬಯಸುತ್ತಾಳೆ? ಅದು ಅವಳಿಗೇ ಗೊತ್ತಿರಲಿಲ್ಲ. ಆದರೆ ಅವಳಿಗೆ ಬಾಳಿನಲ್ಲಿ ಹೇಳತೀರದ ಬೇಸರ ಅತೃಪ್ತಿ ಬಂದುಬಿಟ್ಟಿತು.

ಅವಳ ಆಗಿನ ವಿಹ್ವಲ ಮನಸ್ಥಿತಿಯಲ್ಲಿ ಹೇಮಂತನನ್ನು ಈಗಿರುವಂತೆ ಅಲ್ಲದೆ ಇನ್ನಾವ ವಿಧದಲ್ಲಾದರೂ ಕಲ್ಪನೆಮಾಡಿಕೊಳ್ಳುವುದೂ ಅಸಾಧ್ಯ ವಾಗಿತ್ತು.

"....ಆದರೂ ತಾವು ಎರಡು ಮಕ್ಕಳ ತಾಯಿತಂದೆಗಳು.... ಆದರೆ ತನ್ನ ತಪ್ಪಾದರೂ ಏನು? ಹೇಮಂತನ ಮನಸ್ಸನ್ನು ತಾನು ಪ್ರಸನ್ನಗೊಳಿಸಲು ಶಕ್ಯಳಾಗಿಲ್ಲ....ಮತ್ತೆ ಮತ್ತೆ ಅದೇ ವಾಕ್ಯ ನೆನಪಿಗೆ ಬರುತ್ತಿದೆ, ಚೇಳಿನಂತೆ ಕುಟುಕುತ್ತಿದೆ—ಯಾವ ಸ್ತ್ರೀ ತನ್ನ ಪತಿಯ ಮನಸ್ಸನ್ನು ಪ್ರಸನ್ನಗೊಳಿಸಲಾರಳೋ......ಅವಳೂ ಒಬ್ಬ ಸ್ತ್ರೀಯೆ? ......ತಾನು ಅವನಿಗಾಗಿ ಮಕ್ಕಳಿಗಾಗಿ ಎಷ್ಟು ದುಡಿಯುತ್ತಿದ್ದಾಳೆ. ಬೆಳಗಿನಿಂದ ಸಂಜೆಯವರೆಗೆ ಕ್ಷಣಮಾತ್ರ ಬಿಡುವಿಲ್ಲದೆ....ಮನೆಯನ್ನು ಅದೆಷ್ಟು ಒಪ್ಪವಾಗಿ ಸುಂದರವಾಗಿಟ್ಟಿದ್ದಾಳೆ! ತನ್ನ ಬಡಮನೆಯ ಸುವ್ಯವಸ್ಥೆ, ಅಂದಚೆಂದಗಳನ್ನು ನೋಡಿ ತನ್ನ ಸಿರಿವಂತ ಗೆಳತಿಯರೂ ಕರುಬುವಂತೆ ಇಟ್ಟಿದ್ದಾಳೆ. ಆದರೆ ತನ್ನ ಕಲೆಯ ಕೈವಾಡವನ್ನು ಕಣ್ಣೆತ್ತಿ ನೋಡಲು ಪುರಸತ್ತಿಲ್ಲ ಹೇಮಂತನಿಗೆ........ಹಿಂದೊಮ್ಮೆ ಯಾವ ಮಾತಿಗೋ ಅವನು ರೊಚ್ಚಿಗೆದ್ದು ತನ್ನನ್ನು ತಾನು ಗಿರಣಿಯ ಕೂಲಿ ಯೆಂದು ಕರೆದುಕೊಂಡಿದ್ದನು. ಹೌದು, ಅವನು ಗಿರಣಿಯ ಕೂಲಿ. ತಾನು ಮನೆಯ ಗುಲಾಮಳು...."

ಬಿಕ್ಕಿಬಿಕ್ಕಿ ಅತ್ತಳು ಮಾಲತಿ. ನೀರುಗಣ್ಣಿನ ನೋಟ ಒಮ್ಮೆಯೇ ಎದುರು ಗೋಡೆಯ ಮೇಲೆ ತೂಗುಹಾಕಿದ್ದ ಪತಿಯ ಭಾವಚಿತ್ರದ ಮೇಲೆ ಬಿತ್ತು. ಮದುವೆಯಾದ ಹೊಸದರಲ್ಲಿ ಯಾವುದೋ ಒಂದು ರಸಗಳಿಗೆಯಲ್ಲಿ ತಾನೇ ತೆಗೆದಿದ್ದ ಫೋಟೋ ಅದು. ದೀಪಾವಳಿಯ ಉಡುಗೊರೆಯೆಂದು ಹೇಮಂತನು ಅವಳಿಗೆ ಒಂದು ಹೊಸ 'ಕ್ಯಾಮರಾ' ತೆಗೆದುಕೊಟ್ಟಿ ದ್ದನು.

ಅದನ್ನು ನೋಡಿದೊಡನೆ ಅವಳಿಗೆ ಹೇಮಂತನ ಬಗ್ಗೆ ತಲೆದೋರಿದ್ದ ಕೋಪ, ಜುಗುಪ್ಸೆಗಳೆಲ್ಲಾ ಮಾಯವಾಗಿ ಮಮತೆ ಮೂಡಿತು.

ಆ ಕಣ್ಣ ಪ್ರೇಮದ ತನಿಬೆಳಕು, ಮುದ್ದು ಮುಖದಲ್ಲಿ ರಂಜಿಸುತ್ತಿರುವ ಎಳೆಯ ಕಳೆ ಇಂದು ಜೀವಂತ ಹೇಮಂತನಲ್ಲಿ ಇಲ್ಲವೇ ಇಲ್ಲ. ಆ ಉತ್ಸಾಹ, ನಗೆನೋಟ, ನಲ್ನುಡಿ ಎಲ್ಲಿ ಹೋಯಿತು?

ಈ ಗಿರಣಿಗಳು, ಗಿರಣಿಯ ಮಾಲೀಕರು ಅವನ ಜೀವವನ್ನು ಹಿಂಡಿ ಬಿಟ್ಟಿದ್ದಾರೆ. ಅವನ ಸತ್ತ್ವಸಾರವನ್ನೆಲ್ಲಾ ಕಸಿದುಕೊಂಡು ನುಂಗಿ ನೊಣೆ ದಿದ್ದಾರೆ. ಅಯ್ಯೋ! ಏನನ್ಯಾಯ!

ದಿನದಿನಕ್ಕೆ ಹೇಮಂತ ಮುಪ್ಪಾಗುತ್ತಾ ನಡೆದಿದ್ದಾನೆ. ಅವನಲ್ಲಿ ಹುರುಪೇ ಇಲ್ಲ. ಅವನು ತನ್ನೊಡನೆ ಏನು ತಾನೇ ಸಲ್ಲಾಪವಾಡಿ ಯಾನು?

ಅಲ್ಲದೆ ಒಬ್ಬೊಬ್ಬರ ಸ್ವಭಾವ ಒಂದೊಂದು ತರಹ. ತನ್ನಂತೆ ಅವನು ಭಾವುಕಜೀವಿಯಲ್ಲ. ಅಷ್ಟಕ್ಕೇ ಅವನಿಗೆ ತನ್ನಮೇಲೆ ಪ್ರೇಮ ವಿಲ್ಲವೆಂದು ಭಾವಿಸಿಕೊಂಡು ವೃಥಾ ವ್ಯಥೆಪಡುವುದು ಮೂರ್ಖತನವಲ್ಲದೆ ಮತ್ತೇನು? .... ಅವಳ ವಿಚಾರಧಾರೆ ನೂರುದಾರಿಯಲ್ಲಿ ತೀವ್ರಗತಿ ಯಲ್ಲಿ ಹರಿಯುತ್ತಿತ್ತು.

ತನಗೆ ಹೇಮಂತನ ಸಹವಾಸ ಸುಖ ಸಾಕಾದಷ್ಟು ದೊರಕುತ್ತಿಲ್ಲ ವೆಂಬುದಷ್ಟೇ ಅವಳ ವ್ಯಥೆಗೆ ಕಾರಣವಾಗಿರಲಿಲ್ಲ. ಅದಕ್ಕಿಂತ ಹೆಚ್ಚಾಗಿ "ನಾನು ಸುಖವಾಗಿಲ್ಲದಿದ್ದರೆ ಹೋಗಲಿ. ಈ ಜೀವ ತಾನಾದರೂ ಸುಖ ವಾಗಿಲ್ಲವಲ್ಲಾ ಅಹರ್ನಿಶಿ ದುಡಿದು ದುಡಿದು ನವೆದು ಹೋಗುತ್ತಿರು ವುದಲ್ಲಾ" ಎಂಬ ಕೊರಗು ಅವಳನ್ನು ಪೀಡಿಸುತ್ತಿತ್ತು.

ಇದ್ದಕ್ಕಿದ್ದ ಹಾಗೆ ತಾನು ಊಟಕ್ಕೆ ಕುಳಿತಿದ್ದೇನೆಂದು ಅವಳ ಲಕ್ಷ್ಯದಲ್ಲಿ ಬಂತು. ತನ್ನ ಯೋಚನೆಗಳನ್ನು ಬದಿಗೊತ್ತಿ ಉಂಡ ಶಾಸ್ತ್ರ ಮಾಡಿ ಎದ್ದಳು.

ಅಡಿಗೆಯ ಮನೆಗೆ ಹೋಗಿ ಕಸಮುಸುರೆಯ ಕೆಲಸವನ್ನೆಲ್ಲಾ ಮಾಡಿ ಮುಗಿಸಿದಳು. ಗಂಟೆ ಹನ್ನೆರಡಾಗಿತ್ತು. ಮಕ್ಕಳಿಬ್ಬರೂ ಹಾಯಾಗಿ ಮಲಗಿ ನಿದ್ರಿಸುತ್ತಿದ್ದರು. ಅರೆಲೋಕ ನಿದ್ರೆಯ ಮಡಿಲಲ್ಲಿ ನಿಷ್ಪಂದ ವಾಗಿತ್ತು. ಮೈ ಬಳಲಿ ಕಣ್ಣು ಸೋತಿದ್ದರೂ ಅವಳಿಗೆ ಮಾತ್ರ ನಿದ್ರೆ ಬರುವಂತಿರಲಿಲ್ಲ.

ತಮ್ಮ ದಾಂಪತ್ಯ ಜೀವನದ ಸಂಕ್ಷಿಪ್ತ ಚರಿತ್ರೆಯೇ ಬಗೆಯ ಭಿತ್ತಿಯ ಮೇಲೆ ಸುಳಿದು ಹೋಯಿತು.

ಗಂಡನ ಮನೆಗೆ ಬಂದ ನಾಲ್ಕುದಿನ ಎಲ್ಲ ಸುಲಲಿತವಾಗಿತ್ತು. ಅತ್ತೆ ಮಾವಂದಿರು ಅವಳನ್ನು ವಿಶ್ವಾಸದಿಂದ ಕಾಣುತ್ತಿದ್ದರು. ಆದರೆ ಕೆಲಸದ ಮೇಲೆ ಹೇಮಂತ ಧಾರವಾಡಕ್ಕೆ ಹೋದಮೇಲೆ ಹಗಲು ಮುಪ್ಪಾಗ ವನ್ನೆಲ್ಲಾ ಅವನ ಕೆಲಸವೇ ಆಕ್ರಮಿಸಿಕೊಂಡುಬಿಡುತ್ತಿತ್ತು. ಆಮೇಲೆ ಯಾವ ಕಾರಣಕ್ಕಾಗಿಯೋ ಕೆಲಸ ಹೋಯಿತು. ಏಕೆಂದು ಈಗ ನೆನಪಿಲ್ಲ.

ನಾಲ್ಕಾರು ತಿಂಗಳು ಕೆಲಸಕ್ಕಾಗಿ ಅಲೆದಲೆದು, ಬೊಂಬಾಯಿನ ಮಿಲ್ಲೊಂದರಲ್ಲಿ ಕೆಲಸಕ್ಕೆ ಸೇರಿದನು. ಮಾಲತಿ ಇಡಿಯ ದಿನ ಮನೆಯಲ್ಲಿ ಒಬ್ಬಳೇ ಇರಬೇಕಾಗುತ್ತಿತ್ತು. ಆರು ತಿಂಗಳೊಳಗಾಗಿ ಕೆಲಸಗಾರರ ಮುಷ್ಕರ ಆರಂಭವಾಗಿ, ಆ ಮುಷ್ಕರದಲ್ಲಿ ಹೇಮಂತನೂ ಸೇರಿದ್ದುದರಿಂದ ಅವನು ಕೆಲಸ ಕಳೆದುಕೊಳ್ಳುವ ಪ್ರಸಂಗ ಬಂತು. ಅದೇ ತಾನೇ ರೂಪಲತಾ ಹುಟ್ಟಿ ಎರಡು ತಿಂಗಳಾಗಿತ್ತು. ಯಾರೋ ಪುಣ್ಯಾತ್ಮರು "ಈ ದುರ್ಲಕ್ಷಣದ ಹೆಣ್ಣು ಹುಟ್ಟಿ ಅಪ್ಪನ ಕೆಲಸ ಕಸಿದುಕೊಂಡಿತು" ಎಂದರು. ಮತ್ತಾರೋ ಕ್ರಿಶ್ಚಿಯನ್ನರ ಹಾಗೆ ರೂಪಲತಾ ಅಂತ ಹೆಸರಿಟ್ಟಿದ್ದಾಳೆ ಈ ಬಿನ್ನಾಣೆ, ಮೂದೇವಿಯಂತ ಹೆಸರಿಡೋದರ ಬದಲು ಎಂದು ಅಪಹಾಸ್ಯ ಮಾಡಿದ್ದರು. ಅಣ್ಣ ಅತ್ತಿಗೆಯರ ಅಧೀನದಲ್ಲಿ ಹೆಚ್ಚು ದಿನ ನಿಲ್ಲಲಾರದೆ, ಕೆಲಸವಿಲ್ಲದೆ, ಕುಹಕಿಗಳ ಚುಚ್ಚುಮಾತುಗಳನ್ನು ಕೇಳಲಾರದೆ, ಇತ್ತ ಕೆಲಸವಿಲ್ಲದ ಕಾಲದಲ್ಲಿ ಗಂಡನ ಬಳಿಗೆ ಓಡಿಬಂದು, ಪರ ವೂರಿನಲ್ಲಿ ಅವನಿಗೆ ಹೊರೆಯಾಗಿರಲಾರದೆ ಅದೆಷ್ಟು ತೊಳಲಿದಳೋ ಆ ಭಗವಂತನಿಗೇ ಗೊತ್ತು.

ಜಡದೇಹ ತೌರಿನಲ್ಲಿ, ಮನಸ್ಸೆಲ್ಲಾ ಹೇಮಂತನ ಬಳಿಯಲ್ಲಿ ಸುಳಿದಾಡುತ್ತಿದ್ದು, ಬದುಕು ಒಂದು ತಪಸ್ಸಾಯಿತು.

ಕಡೆಗೆ ಹೇಮಂತ ಅಲಹಾಬಾದಿನ ಕಂಪೆನಿಯೊಂದರ ಕಾರಕೂನನಾಗಿ ಸೇರಿಕೊಂಡನು. ಒಡನೆಯೇ ಅವಳು ಗಂಡನ ಕರೆಯೋಲೆಯನ್ನೂ ಕಾಯದೆ ತಮ್ಮನೊಡನೆ ಅಲಹಾಬಾದಿಗೆ ಬಂದಳು.

ಹೇಮಂತನಿಗೆ ಸರಿಯಾದ ಮನೆ ಸಿಕ್ಕದೆ ಒಂದು ರೂಮು ಮಾಡಿಕೊಂಡಿದ್ದನು. ಹೇಮಂತ ಗುರುತೇ ಸಿಕ್ಕದಷ್ಟು ಕೃಶವಾಗಿದ್ದನು. ಕೆಲವೇ ದಿನಗಳಲ್ಲಿ ಮಲೇರಿಯಾ ಜ್ವರಕ್ಕೆ ತುತ್ತಾಗಿ ಸಾವು ಬದುಕಿನ ತೂಗುಯ್ಯಾಲೆಯಲ್ಲಿ ತೂರಾಡಿದನು. ದಿಕ್ಕುದೆಶೆಗಾಣದ ಪರವೂರಿನಲ್ಲಿ ಗಂಡನಿಗೆ ಬರುತ್ತಿದ್ದ ಸ್ವಲ್ಪ ಸಂಬಳದಲ್ಲಿ ರೋಗಿಷ್ಟ ಗಂಡನ ಔಷಧಿ ಪಥ್ಯ, ದುರ್ಬಲ ಶಿಶುವಿನ ಆರೈಕೆ ಮಾಡಬೇಕಾದ ಕಠಿಣ ಭಾರ ಅವಳ ಮೇಲೆ ಬಿದ್ದಿತ್ತು. ಅಬ್ಬ! ಆ ಕಾಲವನ್ನು ನೆನೆಸಿಕೊಂಡರೆ ಮೈ ಜುಮ್ಮೆನ್ನುತ್ತೆ. ಆ ಸಣ್ಣ ರೂಮು, ಅಲ್ಲೇ ಜ್ವರದಿಂದ ನರಳುತ್ತಿದ್ದ ಹೇಮಂತನ ಹಾಸಿಗೆ, ಮಗುವಿನ ತೊಟ್ಟಿಲು, ಇದ್ದಿಲಮೂಟೆ. ಒಲೆ, ಪಾತ್ರೆ ಪರಟೆ, ಅರಿವೆ ಅಂಚಡಿ ....ಮಾಲತಿಯ ಮಾಂಗಲ್ಯದ ಪುಣ್ಯ. ಭುವನೇಶ್ವರಿಯ ದಯೆ, ಹೇಮಂತನು ಉಳಿದುಕೊಂಡನು.

ಕೆಲಸವಿಲ್ಲದ ಕಾಲದಲ್ಲಿ ಹೇಮಂತ ಅನಿವಾರ್ಯವಾಗಿ ಮಾಡಿದ್ದ ಸಾಲದ ಜೊತೆಗೆ, ಔಷಧಿ ಪಥ್ಯಗಳ ಖರ್ಚು, ಇನ್ನೂ ಅದೆಷ್ಟೋ ಸಣ್ಣ ಪುಟ್ಟ ಖರ್ಚುಗಳು ಸೇರಿ ಸಾಲದ ಹೊರೆ ಹೆಚ್ಚಿತ್ತು. ಬರುವ ಸಂಬಳ ಅಶನವಸನಕ್ಕೆ ಸಾಲುತ್ತಿರಲಿಲ್ಲ. ಇನ್ನು ಸಾಲ ತೀರಿಸುವುದೆಲ್ಲಿ ಬಂತು? ತನ್ನ ಕೈಯ ಎರಡು ಜೊತೆ ಬಂಗಾರದ ಬಳೆಗಳನ್ನು ಮಾರಿ ಸಾಲ ತೀರಿಸಬೇಕಾಯಿತು.

ಮತ್ತೆ ಅವರು ಹಾಯಾಗಿ ಉಸಿರಾಡಿಸುವ ಹೊತ್ತಿಗೆ ಆರು ತಿಂಗಳು ಬೇಕಾಯಿತು.

ಒಂದು ದಿನ ಅಕಸ್ಮಾತ್ತಾಗಿ ಹೇಮಂತ ಬಂದು ಹೇಳಿದನು—
"ಕೆಲಸಕ್ಕೆ ರಾಜೀನಾಮೆ ಕೊಟ್ಟು ಬಂದಿದ್ದೇನೆ ಮಾಲತಿ."

ಚಕಿತಳಾಗಿ ಕಾತರಸ್ವರದಲ್ಲಿ ಕೇಳಿದಳು ಮಾಲತಿ—"ಏಕೆ?"

೩ ತಿಂಗಳ ಕೆಳಗೆ ಕಂಪೆನಿಯ ಮಾಲೀಕ ಮ್ಯಾಟ್ರಿಕ್ ಮಾಡಿದ್ದ ಯುವತಿಯೊಬ್ಬಳನ್ನು ಕೆಲಸಕ್ಕೆ ತೆಗೆದುಕೊಂಡಿದ್ದನು. ಗ್ರಾಜುಯೇಟಾದ ಹೇಮಂತನಿಗೂ ಒಂದೇ ಸಂಬಳ. ಆಕೆಗೂ ಒಂದೇ ಸಂಬಳ. ಆ ಹುಡುಗಿ ರೂಪಿನಲ್ಲಿ ಅಷ್ಟಕ್ಕಷ್ಟೇ ಆದರೂ Make up ಮಾಡಿಕೊಳ್ಳುವುದರಲ್ಲಿ, ಮಾತು ರೀತಿಗಳಲ್ಲಿ ಚತುರೆ. ಅವಳು ಮಾಲೀಕನೊಡನೆ ತುಂಬ ಸದರ

ವಾಗಿರುತ್ತಿದ್ದಳು. ಹೇಮಂತ ಕಂಡೂ ಕಾಣದಂತೆ ಸುಮ್ಮನಿದ್ದನು. ಈ ಮಧ್ಯೆ ಮಾಲೀಕನಿಂದ ಎಷ್ಟೆಷ್ಟೋ ವಿಧದಲ್ಲಿ ಅವನ ಅಪಮಾನ ವಾಯಿತು. ಒಮ್ಮೆ ಅವನು ತನ್ನ ಹೆಂಡತಿಯ ಬಟ್ಟೆ ಬರೆಗಳನ್ನು "Dry wash" ಗೆ ಕೊಟ್ಟು ಬರಲು ಹೇಮಂತನಿಗೆ ಅಪ್ಪಣೆಮಾಡಿದನು. ಇನ್ನೊಮ್ಮೆ ತನ್ನ ಮನೆಗೆ ರೇಷನ್ ಷಾಪಿನಿಂದ ಇದ್ದಿಲು ತರಲು ಹೇಳಿ ದನು. ಹೇಮಂತ ಇಲ್ಲದ ಅನುನಯವನ್ನು ಕಡಾ ತಂದುಕೊಂಡು, ಬೆಲ್ಲದಂತ ಮಾತಿನಲ್ಲೆ ಒಲ್ಲೆನೆಂದು ನಿರಾಕರಿಸಿದ್ದನು. ಆದರೆ ಏಕೋ ಮಾಲೀಕ ಅವನನ್ನು ಕೆಲಸದಿಂದ ಆಗಲೇ ತೆಗೆದುಹಾಕಲಿಲ್ಲ.

ಮತ್ತೆ ಇದೀಗ ಆ ಯುವತಿಯ ಸಂಬಳವನ್ನು ಏಕ್‌ದಂ ನೂರು ರೂಪಾಯಿಗೆ ಹೆಚ್ಚಿಸಿ ಅವನ ಮೇಲಧಿಕಾರಿಣಿಯಾಗಿ ನಿಯಮಿಸಿದನು. ಹೇಮಂತನು ಸ್ವಾಭಿಮಾನಿ. ಆದರೆ ದುರಭಿಮಾನಿಯಲ್ಲ. ಅವನಿಗೆ ಸ್ವಭಾವವಾಗಿಯೇ ಸ್ತ್ರೀಯರಲ್ಲಿ ಅಧಿಕ ಗೌರವ. ಅವನು ಸ್ತ್ರೀ ಸ್ವಾತಂತ್ರ್ಯ ವಾದಿ. ಮತ್ತು ಸ್ತ್ರೀಯರ ಉನ್ನತಿಯಾದಲ್ಲದೆ ದೇಶದಲ್ಲಿ ಸಾರ್ವತ್ರಿಕ ಪ್ರಗತಿ ಸಾಧ್ಯವೇ ಇಲ್ಲವೆಂದು ಮನಗಂಡಿದ್ದನು. ಸ್ತ್ರೀಯರಿಗೆ ಇಂದಿನ ಪರಿಸ್ಥಿತಿಯಲ್ಲಿ ಆರ್ಥಿಕ ಸ್ವಾತಂತ್ರ್ಯವಿರಬೇಕಾದ ಅಗತ್ಯವನ್ನವನು ಅರಿತಿದ್ದನು. ಅವನು ಗೆಳೆಯರೊಡನೆ ಆಡುತ್ತಿದ್ದ ಎಲ್ಲ ಮಾತಿನಲ್ಲಿ ಅವನ ಈ ಉದಾರ ವಿಚಾರವಾಹಿನಿ ವ್ಯಕ್ತವಾಗುತ್ತಿತ್ತು.

ಆ ಯುವತಿ—'ವಿಜಯಾ' ಆಕೆಯ ಹೆಸರು—ತನ್ನ ಸಹಜ ಯೋಗ್ಯತೆ ಕಾರ್ಯದಕ್ಷತೆಗಳ ಫಲವಾಗಿ ಮೇಲೇರಿದ್ದರೆ ಅವನಿಗಾವ ವ್ಯಥೆಯೂ ಇರುತ್ತಿರಲಿಲ್ಲ. ಹೆಂಗಸೊಬ್ಬಳ ಕೈಕೆಳಗೆ ನೌಕರಿ ಮಾಡುವುದು ತನ್ನ ಪುಂಸತ್ವಕ್ಕೆ ಲಾಂಛನಾಸ್ಪದವೆಂದು ಭಾವಿಸುತ್ತಿರಲಿಲ್ಲ.

ಆದರೆ 'ವಿಜಯಾ' ಮೇಲೇರಿದ ಬಗೆ?....ಸ್ವಚ್ಛವಾಗಿ ಟ್ರೈಪ್ ಮಾಡಲು ಕೂಡಾ ಬರದು ಆಕೆಗೆ. ತಪ್ಪಿಲ್ಲದ ಹಾಗೆ ಒಂದು ಹತ್ತುಲೈನು ಇಂಗ್ಲಿಷ್ ಬರೆಯಲು ಬಾರದು. ಗರತಿಯಾದ ಹೆಣ್ಣುಮಗಳಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದಳವಳು. ಕಂಪೆನಿಯ ಮಾಲೀಕನ ಕಟಾಕ್ಷ, ಅವಳ ಒನಪು, ವೈಯಾರ ಅವಳನ್ನು ಮೇಲೇರಿಸಿತ್ತು. ಅವಳ ಕೈಕೆಳಗೆ ಕೆಲಸಮಾಡುವುದು ಅವನ ಸ್ವಾಭಿಮಾನಕ್ಕೆ, ಆತ್ಮಗೌರವಕ್ಕೆ ಒಪ್ಪಲಿಲ್ಲ.

ಕೆಲಸ ಬಿಟ್ಟರೆ ತಾನು ಕಷ್ಟಪಡುವುದು ಹಾಗಿರಲಿ. ತನ್ನ ಹೆಂಡತಿ ಮಕ್ಕಳನ್ನು ಬಡತನದ ನೂರು ಭಂಗಗಳಿಗೊಳಪಡಿಸಬೇಕಾಗುತ್ತದೆಂದು ಅವನಿಗೆ ಗೊತ್ತಿತ್ತು. ಆದರೆ ಹೆಂಡತಿ ಮಕ್ಕಳನ್ನು ಸಾಕಲೋಸುಗ ಆತ್ಮ ಗೌರವವನ್ನು ಬಲಿಕೊಡಲಾಗುತ್ತದೆಯೇ? ಹೊಟ್ಟೆಯ ಪಾಡಿಗಿಂತ ಹೆಚ್ಚಿನದು ಜಗತ್ತಿನಲ್ಲಿ ಮತ್ತೇನೂ ಇಲ್ಲವೇ?

ಎದೆ ಕಲ್ಲುಮಾಡಿಕೊಂಡು ರಾಜೀನಾಮೆ ಕೊಟ್ಟುಬಂದಿದ್ದ ಹೇಮಂತ.

ಈ ಘಟನೆಯಿಂದ ಹೇಮಂತನಂಥ ಸೂಕ್ಷ್ಮಮನಸ್ಸಿನ ಧೀರೋದಾತ್ತ ತರುಣನಿಗೆ ಅದೆಂಥ ದುಃಖವಾಗಿರಬಹುದೆಂಬ ಕಲ್ಪನೆ ಅವಳಿಗಿತ್ತು.

"ಇದೊಂದೂ ಇಲ್ಲಿಯವರೆಗೂ ನನಗೆ ನೀವೇಕೆ ಹೇಳಲೇ ಇಲ್ಲ. ನನಗೆ ಗೊತ್ತಿದ್ದರೆ ನಾನು ಬೇರೇ ನಿಮ್ಮನ್ನು ಈ ಕಂಪೆನಿಯ ಸುಡುಗಾಡು ಕೆಲಸಕ್ಕೆ ಹೋಗಗೊಡುತ್ತಿದ್ದಿಲ್ಲ" ವ್ಯಾಕುಲಳಾಗಿ ಕೇಳಿದಳವಳು.

"ಏನೆಂದು ಹೇಳಿಕೊಳ್ಳಬೇಕಾಗಿತ್ತು ಮಾಲತೀ? ನನ್ನ ನಿವಾರಿಸಲಾರದ ದುಃಖವನ್ನು ನಿನಗೂ ಹಂಚಿಕೊಡಲೇ?" ಎನ್ನುತ್ತ ನಿಟ್ಟುಸಿರ್ಗರೆದನು ಹೇಮಂತ.

ಮತ್ತೆ ಅವರ ಬಾಳನ್ನು ಕಾರ್ಗತ್ತಲು ಕವಿಯಿತು. ತನ್ನ ತಂದೆಯಿಂದ ಏನಾದರೂ ಸಹಾಯ ಪಡೆಯುವಾ ಎಂದರೆ ಹೇಮಂತನು ಎಲ್ಲಿ ಕೋಪಿಸಿಕೊಳ್ಳುವನೋ ಎಂಬ ಭಯ. ಮಾವ ಅಳಿಯಂದಿರಿಗೆ ಎಣ್ಣೆ—ಸೀಗೇಕಾಯಿಯಷ್ಟು ಸ್ನೇಹವಿತ್ತು. ಅವರ ಸ್ನೇಹಿತರೋ ಹೆಚ್ಚು ಕಡಮೆ ಎಲ್ಲಾ ತಮ್ಮ ಸ್ಥಿತಿಯಲ್ಲಿದ್ದವರೇ! ಸಾಲ ಕೊಡುವಂಥ ಸಿರಿವಂತ ಆಪ್ತೇಷ್ಟರಾರೂ ಅವರಿಗಿರಲಿಲ್ಲ. ಇದ್ದರೂ ತೀರಿಸುವ ಮಾರ್ಗವಿಲ್ಲದೆ ಯಾರನ್ನು ತಾನೇ ಸಾಲ ಕೇಳಬೇಕಾಗುತ್ತೆ?

ಪುಣ್ಯವಶಾತ್ ಕೆಲವು ದಿನಗಳಲ್ಲೇ ಲಕ್ನೋ ಗಿರಣಿಯೊಂದರಲ್ಲಿ ೨೦೦ ರೂ. ಸಂಬಳದ ಉದ್ಯೋಗವೊಂದು ದೊರಕಿ ಹೋದ ಜೀವ ಬಂದ ಹಾಗಾಯಿತು. ಬಾಳು ಮತ್ತೆ ಹಸನಾಯಿತು.

ಆ ಗಿರಣಿಗೆ ಸೇರಿದ ಎರಡು ವರ್ಷಕ್ಕೆ ಸುದರ್ಶನ ಹುಟ್ಟಿದನು. ಹೇಮಂತನೂ ತನ್ನ ಕಾರ್ಯದಕ್ಷತೆಯಿಂದ ಮೇಲಿನಧಿಕಾರಿಗಳನ್ನು ಮೆಚ್ಚಿಸಿ ಉದ್ಯೋಗದಲ್ಲಿ ಮುಂದುವರಿಯುತ್ತಿದ್ದನು. ಸುತ್ತಮುತ್ತಣ ಜನರ ಸ್ನೇಹ ಗೌರವಗಳನ್ನು ಸಂಪಾದಿಸಿಕೊಂಡು ಅವರು ಸುಖವಾಗಿದ್ದರು. ಅಂತೂ ನಾಲ್ಕು ವರ್ಷಗಳಿಂದ ಅವರ ಬಾಳು ಹಾಲುಹೊಳೆಯಾಗಿ ಸುಸೂತ್ರವಾಗಿ ಹರಿದುಕೊಂಡು ಬಂದಿತು. ಸಿರಿವಂತಿಕೆಯ ಸುಖವಿಲಾಸ ಗಳಿಲ್ಲದಿದ್ದರೂ ಅಶನವಸನಗಳಿಗೆ ತಾಪತ್ರಯವಿರಲಿಲ್ಲ. ಹೇಮಂತನ ಇಡೀದಿನ ಮಿಲ್ಲಿನಲ್ಲೇ ಕಳೆದುಹೋಗುತ್ತದಲ್ಲಾ, ಅವನು ಹೊತ್ತು ಹೊತ್ತಿಗೆ ಸರಿಯಾಗಿ ಊಟನಿದ್ರೆಗಳಿಲ್ಲದೆ ಬಡವಾಗುತ್ತಿರುವನಲ್ಲಾ ಎಂಬುದೊಂದೇ ಅವಳ ಕೊರಗಾಗಿತ್ತು.

ಕೆಲಸಗಾರರು ಮುಷ್ಕರ ನಡೆಸಿಯಾರು ಎಂದು ಕೇಳಿದಂದಿನಿಂದ ಹುತ್ತಿಲ್ಲಿ ಕೆಲಸ ಹೋದೀತೋ, ಮುಷ್ಕರದಿಂದ ಕೆಲಸಗಾರರ ಬೇಡಿಕೆಗಳು ಸಲ್ಲುವ ಬದಲು ಏನೇನು ವಿಪರೀತ ಪರಿಣಾಮಗಳಾಗುವುವೊ ಎಂಬು ದೊಂದು ಹೊಸ ಚಿಂತೆ ಉತ್ಪನ್ನವಾಗಿತ್ತು.

*　　*　　*

ಗಡಿಯಾರದತ್ತ ತಿರುಗಿ ನೋಡಿದಳು ಮಾಲತಿ. ಒಂದೂಕಾಲು ಗಂಟೆಯಾಗಿತ್ತು. ಅವನಿನ್ನೂ ಮನೆಗೆ ಬಂದಿರಲಿಲ್ಲ. ಮಾಲತಿ ಉದ್ವಿಗ್ನ ಳಾದಳು. ಇಲ್ಲಸಲ್ಲದ ಭಯಶಂಕೆಗಳು ಅವಳನ್ನು ಪೀಡಿಸಿದುವು. ಹೇಮಂತನಿಗೆ ಯಾವ ಕೇಡೂ ಆಗದಿರಲೆಂದು ಪ್ರಾರ್ಥಿಸಿದಳು—ದೇವರನ್ನು.

ಬಾಗಿಲನ್ನು ತೆರೆದು ಹೇಮಂತನನ್ನು ಇದಿರುನೋಡುತ್ತಾ ಹೊಸಲಲ್ಲಿ ಎರಡುಗಳಿಗೆ ನಿಂತಳು. ಅಂಧಕಾರಾವೃತ, ನಕ್ಷತ್ರಹೀನ ಶುಷ್ಕಗಗನ ಶೋಕ ನಿರಾಶೆಗಳು ಕವಿದ ಅವಳ ಹೃದಯದ ಪ್ರತಿಬಿಂಬದಂತಿತ್ತು. ಅವಳ ಗಂಭೀರದೃಷ್ಟಿ, ಎದುರಿನ ಅಂಧಕಾರಗರ್ಭವನ್ನು ಭೇದಿಸಿ ನೋಡು ತ್ತಿತ್ತು. ಹೇಮಂತನು ಬರುವ ಸುಳಿವೇ ಇರಲಿಲ್ಲ.

ಸ್ವಲ್ಪಹೊತ್ತಿನಮೇಲೆ ಹತಾಶಳಾಗಿ ಒಳಗೆ ಬಂದು ಬಾಗಿಲುಹಾಕಿ ದೀಪ ಆರಿಸಿ ಮಲಗಿಕೊಂಡಳು. ಹೇಮಂತನ ಚಿಂತೆ ಅವಳ ನಿದ್ರೆಯನ್ನು

ಕಸಿದುಕೊಂಡು ಬಿಟ್ಟಿತ್ತು. ಅದೆಷ್ಟೋ ಹೊತ್ತು ಎಚ್ಚರವಾಗಿಯೇ ಇದ್ದಳು.

* * *

ಆ ರಾತ್ರಿಯ ನಿಶ್ಶಬ್ದದಲ್ಲಿ ಹೊರಗೆ ಪಡಸಾಲೆಯಲ್ಲಿ ಅವಳಿಗೆ ಚಿರಪರಿಚಿತವಾಗಿದ್ದ ಹೇಮಂತನ ಹೆಜ್ಜೆಯ ಸಪ್ಪಳ ಸ್ಫುಟವಾಗಿ ಕೇಳಿಬಂತು. ಮಾಲತಿ ತಟ್ಟನೆ ಎದ್ದು ಬಾಗಿಲು ತೆಗೆದಳು. ಹೇಮಂತ ಒಳಗೆ ಬಂದು ಆಶ್ಚರ್ಯದಿಂದ ಕೇಳಿದನು—"ಏನು ಇನ್ನೂ ಮಲಗಲಿಲ್ಲವೇ?"

"ಹೇಗೆ ತಾನೇ ನಿದ್ದೆಬಂದೀತು ಹೇಳಿ?"

ಮಾಲತಿ ಸ್ವಿಚ್‌ಹಾಕಿ ಗಡಿಯಾರವನ್ನು ನೋಡಿದಳು. ೩ಕ್ಕೆ ೧೦ ನಿಮಿಷ ಇತ್ತು. ಸಿಡಿಮಿಡಿಗೊಂಡು ಹೇಳಿದಳವಳು—"ಮನುಷ್ಯನನ್ನು ಯಂತ್ರದಂತೆ ದುಡಿಸಿಕೊಳ್ಳುವ ಈ ಮಿಲ್ಲುಗಳಿಗೆಲ್ಲಾ ಯಾರಾದರೂ ಪುಣ್ಯಾತ್ಮರು ಆಟಂಬಾಂಬು ಹಾಕಬಾರದೇ ಅನ್ನಿಸುತ್ತೆ."

"ನನ್ನಮೇಲೆ ನಿನಗೆ ಕೋಪ ಬಂದಿದೆ, ಗೊತ್ತು. ಎಳ್ಳಂತೂ ಎಣ್ಣೆಗೋಣಗುತ್ತೆ ನೀನ್ಯಾಕೊಣಗ್ತೀ ಮರುಳು ಬಿತ್ತವೇಂತ. ನನಗಂತೂ ಗಿರಣೀಲಿ ಕೆಲಸವಿತ್ತು. ನೀನ್ಯಾಕೆ ನಿಷ್ಕಾರಣವಾಗಿ ನಿದ್ದೆಗೆಟ್ಟೆ ಹೇಳು. ಹೋಗಲಿ, ಇನ್ನಾದರೂ ಮಲಗಿಕೋ ಹೋಗು" ಎನ್ನುತ್ತಾ ಸ್ನೇಹಪೂರ್ವಕವಾಗಿ ಅವಳ ಗಲ್ಲವನ್ನು ಚುಂಬಿಸಿದನು. ಆದರೆ ಅಷ್ಟರಿಂದ ಅವಳ ಕೋಪ ಶಮನವಾಗಲಿಲ್ಲ.

ಅವಳು ಹೋಗಿ ಮಂಚದ ಮೇಲೆ ಬಿದ್ದುಕೊಂಡು ಬಿಕ್ಕಿಬಿಕ್ಕಿ ಅಳ ತೊಡಗಿದಳು.

ಹೇಮಂತನು ಒಮ್ಮೆಲೇ ನಿಷ್ಠುರನಾಗಿ ನುಡಿದನು—"ನನ್ನ ಮನಸ್ಸು ಇವತ್ತು ಯಾಕೋ ರೋಸಿಹೋಗಿದೆ ಮಾಲತೀ. ನೀನು ಬೇರೆ ಅತ್ತು ನನ್ನ ಹೊಟ್ಟೇ ಉರಿಸಬೇಡ. ನಾನೇನು ಬೇಕೆಂದು ಇಲ್ಲದ ಕೆಲಸ ಕಲ್ಪಿಸಿಕೊಂಡು ಹೋಗಿದ್ದೆನೇ? ನಮ್ಮಪ್ಪನೋ, ನಿಮ್ಮಪ್ಪನೋ ನಮಗೆ ತಿಂಗಳು ತಿಂಗಳಿಗೆ ೨೦೦–೩೦೦ ರೂಪಾಯಿ ಬರೋ ಹಾಗೆ ಏನಾದರೂ ಆಸ್ತಿಪಾಸ್ತಿ ಬಿಟ್ಟುಕೊಟ್ಟಿದ್ದರೆ, ನಾನೂ ಅಮ್ಮನೋರ ಮುದ್ದುಮುಖಾ ನೋಡುತ್ತಾ ಮೂರ್ಹೊತ್ತೂ ಮನೇಲೇ ಕೂತಿರಬಹುದಾಗಿತ್ತು...."

ನಡುವೆಯೇ ಬುಸುಗುಟ್ಟಿದಳು ಮಾಲತಿ—"ಹೌದು ಹೌದು. ನಮ್ಮಪ್ಪ ನಿಮಗೇನೂ ಕೊಡಲಿಲ್ಲಾಂತ ಇನ್ನೂ ಮುನ್ನೂ ಹಂಗಿಸಿ.... ..........."

ಅಸಹಾಯನಾಗಿ ನಿಟ್ಟುಸಿರು ಬಿಟ್ಟು ನುಡಿದನು ಹೇಮಂತ— "ನೋಡಿದೆಯಾ, ಸುಮ್ಮಸುಮ್ಮನೆ ನನ್ನ ಮಾತಿಗೆ ಅಪಾರ್ಥಮಾಡಿ ಕೊಂಡು ಆಕ್ರೋಶಪಡುತ್ತೀ. ನಿನ್ನ ಹಂಗಿಸಿದೋರು ಯಾರು ಈಗ ಹೇಳು? ನೀನು ನನ್ನಂಥಾ ಬಡಪಾಯಿ ಗಿರಣೀ ಕೂಲೀನ ಮದುವೆಮಾಡಿ ಕೊಳ್ಳೋದರ ಬದಲು ಯಾರಾದರೂ ಜಹಗೀರುದಾರರ ಮಗನ ಕೈಹಿಡಿ ದಿದ್ದರೆ ಚೆನ್ನಾಗಿತ್ತು."

"ಅದಕ್ಕಿಂತ ನಾನು ಹುಟ್ಟದೆಯೇ ಇದ್ದಿದ್ದರೆ ಚೆನ್ನಾಗಿತ್ತು ಎಂದು ಬಿಡಿ" ಎಂದು ನುಡಿದು ಮಾಲತಿ ಪಕ್ಕಕ್ಕೆ ತಿರುಗಿ ಬಿಕ್ಕಿಬಿಕ್ಕಿ ಅಳತೊಡ ಗಿದಳು.

ಹೇಮಂತನಿಗೆ ನಿದ್ರೆ, ಹಸಿವು, ಆಯಾಸ ಎಲ್ಲ ಸೇರಿ ಜೀವವೇ ಭಾರ ವಾಗಿತ್ತು. ಆಗ ಅವನಿಗೆ ಮಾಲತಿಯನ್ನು ಸಂತೈಸುವ ತಾಳ್ಮೆಯಾಗಲೀ, ಪುರಸತ್ತಾಗಲೀ ಇರಲಿಲ್ಲ. ಅವನು ತನ್ನಷ್ಟಕ್ಕೆ ತಾನು ಹಾಸಿಗೆಯ ಮೇಲೆ ಉರುಳಿಕೊಂಡು ನಿದ್ರಾದೇವಿಯ ವಶನಾದನು.

* * *

ಮರುದಿನ ಬೆಳಿಗ್ಗೆ ಮಾಲತಿ ಏಳುವ ಮುನ್ನವೇ ಹೇಮಂತ ಗಿರಣಿಗೆ ಹೊರಟುಹೋಗಿದ್ದನು. ನಡುವೆ ಊಟಕ್ಕೂ ಬರಲಿಲ್ಲ.

ಹಿಂದಿನ ರಾತ್ರಿ ತಾನು ಹೇಮಂತನೊಡನೆ ಆಡಿದ್ದ ಬಿರುನುಡಿಗಳನ್ನು ನೆನೆದು ಪಶ್ಚಾತ್ತಾಪದಗ್ಧಳಾಗಿದ್ದ ಮಾಲತಿ ಲಗುಬಗೆಯಿಂದ ಮನೆಗೆಲಸ ವನ್ನೆಲ್ಲಾ ಮುಗಿಸಿ, ಮಕ್ಕಳಿಗೆ ತಲೆಬಾಚಿ, ಬಟ್ಟೆಬರೆ ಹಾಕಿ, ತಾನೂ ಶುಚಿ ಯಾದ ಮತ್ತು ಚೆಲುವಾದ ಸೀರೆಯೊಂದನ್ನುಟ್ಟುಕೊಂಡು ಹೇಮಂತನನ್ನು ಎದುರುನೋಡುತ್ತಾ ವರಾಂಡಾದಲ್ಲಿ ಕುಳಿತಿದ್ದಳು.

ಸಂಜೆ ಹೇಮಂತ ಬಂದೊಡನೆ ನಗೆಮೊಗದಿಂದ ಅವನನ್ನು ಎದು ರ್ಗೊಂಡು, ಕಾಫೀ ಮತ್ತು ಚೌಚೌ ಅವನ ಮುಂದೆ ತಂದಿಟ್ಟಳು.

ಸುದರ್ಶನ ತಾನು ಆಡುತ್ತಿದ್ದ ಆಟವನ್ನು ಬಿಟ್ಟು ತಂದೆಯ ಬಳಿಗೆ ಓಡಿ ಬಂದನು.

ಹೇಮಂತ ವಿಷಣ್ಣನಾಗಿ ನಕ್ಕು ಹೇಳಿದನು "ಇನ್ನೇನೂ ನೀನು ಗಿರಣಿ, ಕಾರ್ಖಾನೆಗಳನ್ನು ಶಪಿಸುವ ಪ್ರಮೇಯವಿಲ್ಲ ಬಿಡು."

"ಏನು ಹಾಗೆಂದರೆ?" ಶಂಕಿತಳಾಗಿ ಪ್ರಶ್ನಿಸಿದಳವಳು.

"ನನ್ನ dismiss ಮಾಡಿದ್ದಾರೆ."

"ನಾಲ್ಕುವರ್ಷ ಈ ಗಿರಣಿಗೋಸ್ಕರ ಹಗಲೆನ್ನದೆ ಇರುಳನ್ನದೆ ಜೀವ ತೇದುದಕ್ಕೆ ಇದೇ ಪ್ರತಿಫಲ?"

"ಮ್ಯಾನೇಜಿಂಗ್ ಅಥಾರಿಟೀಸ್‌ಗೆ ವಿರುದ್ಧವಾಗಿ ಯೂನಿಯನ್‌ನಲ್ಲಿ ಚಳುವಳೀ ನಡೆಸಿದೀನೀಂತ...." ಹಾಗೆಯೇ ಈಸೀಛೇರ್ ಮೇಲೆ ಕುಳಿತು ಕಣ್ಮುಚ್ಚಿದನು ಹೇಮಂತ.

ಮಾಲತಿಯ ಮುಖ ಬಣ್ಣಗೆಟ್ಟಿತು. ಆದರೂ ತನ್ನ ಅಳಲನ್ನು ನುಂಗಿಕೊಂಡು, ಹೇಮಂತನ ಮುಂಗುರುಳನ್ನು ಮೃದುವಾಗಿ ನೇವರಿಸುತ್ತಾ, ಶಾಂತ ಸ್ವರದಲ್ಲಿ ಹೇಳಿದಳು "ಹೋಗಲಿ ಬಿಡಿ. ಪೀಡೆ ಕಳೆಯಿತು. ಎರಡುದಿನ ಮನೇಲಿ ಸುಧಾರಿಸಿಕೊಳ್ಳಿ. ಪ್ರಾಮಾಣಿಕವಾಗಿ ಕಷ್ಟಪಟ್ಟು ಕೆಲಸಮಾಡುವವರಿಗೆ ಕೆಲಸಕ್ಕೆ ಕೊರತೆಯೇ?"

ಸುದರ್ಶನ ಅವನ ತೊಡೆಯಮೇಲೆ ಹತ್ತಿಕೊಂಡು ಸಂಭ್ರಮದಿಂದ ತೊದಲ್ನುಡಿದನು "ಅಪ್ಪಾ, ಪೋಪೂ ಹೋಗೋಣ ಬಾಪ್ಪಾ."

ಪಕ್ಕದ ಮನೆಯಲ್ಲಿ ಯಾರೋ ಆನಂದ ಪುಲಕಿತ ಉನ್ಮತ್ತ ಮಧುರ ಸ್ವರದಲ್ಲಿ ಗಾನಮಾಡುತ್ತಿದ್ದರು.

"ಪೂರೀ ಹುಯಿಾ ಮೇರಿ ಜೀವನ್‌ಕಿ ಆಶಾ....ಆಶಾ....ಆಶಾ...."

